ಶ್ರೀ ಗುರು ರೇವಣಸಿದ್ಧೇಶ್ವರರ ಪ್ರಸನ್

# ಇಂಗಳೇಶ್ವರ ಗಿರಿ ಅಳಿಯದು ಸಿರಿ

**ಈ ಜಗಕ್ಕೆ ಧರ್ಮದ ತೋರಿದು ನನ್ನೂರು**


ಲೇಖಕರು

**ನಾಗಣ್ಣ ಮಾಹಾದೇವಪ್ಪ ಚಿಗರಿ**



ಪ್ರಕಾಶಕರು

**ಭಾರ್ಗವರಾಮ ಪ್ರಕಾಶನ, ಇಂಗಳೇಶ್ವರ, ಬಿಜಾಪೂರ**



**ಇಂಗಳೇಶ್ವರ ಗಿರಿ ಅಳಿಯದು ಸಿರಿ**
ಈ ಜಗಕ್ಕೆ ಧರ್ಮದ ತೋರಿದು ನನ್ನೂರು

**Ingaleshwar Giri Aliyadu Siri**

ಲೇಖಕರು : **ನಾಗಣ್ಣ ಮಹಾದೇವಪ್ಪ ಚಿಗರಿ**
ತಮ್ಮ ವಿಳಾಸ ನೀಡಿರಿ.

(ಮೂಲ ವಿಳಾಸ) ಅಂಚೆ :

ಹಕ್ಕುಗಳು/Copy Rights : ಲೇಖಕರು/Author

ಪ್ರಕಾಶಕರು/Publisher : ಭಾರ್ಗವರಾಮ ಪ್ರಕಾಶನ, ಇಂಗಳೇಶ್ವರ
ಪೂರ್ಣ ವಿಳಾಶ ನೀಡಿರಿ

Dist.:
Cell:

ಮೊದಲ ಮುದ್ರಣ : ಸಪ್ಟಂಬರ್, ೨೦೨೧

ಪ್ರತಿಗಳು (copy) : ೧೦೦೦

ಬೆಲೆ (Cost) : /–

ಪುಟಗಳು (Pages) : x + ೯೮ = ೧೦೮

ಪುಸ್ತಕದ ಅಳತೆ : ಡೆಮ್ಮಿ ೧/೮

ಬಳಸಿದ ಕಾಗದ : ೭೦ ಜಿಎಸ್ಎಂ ಮ್ಯಾಪ್‌ಲಿಥೋ
ಎನ್.ಎಸ್

ಮುದ್ರಕರು :

Rakshak Group
ABHISHEK PRINTS

**ಅಭಿಷೇಕ ಆಫ್‌ಸೆಟ್ ಪ್ರಿಂಟ್ಸ್,**
ಗಾಂಧಿ ಸರ್ಕಲ್, ಗದಗ–೫೮೨ ೧೦೧.
ಮೊಬೈಲ್ : ೯೮೮೦೬೫೨೬೪೭

## ಮುನ್ನುಡಿ..

ತೆಂಕಣ ಗಾಳಿ ಸೋಂಕಿದೊಡವೊಳ್ನುಡಿಗೇಳ್ದೊಡವಿಂಪನಾಳ್ದಗೇ
ಯಂಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ।
ಪಂಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ
ರಂಕುಸವಿಟ್ಟೊಡಂ ನೆನೆವುದೆನ್ನ ಮನಂ ವನವಾಸಿ ದೇಶಮಂ।

ಎಂಬ ಪ್ರಾಚೀನ ಕವಿ ಸಾಮ್ರಾಟ ಪಂಪ ತನ್ನ ಹುಟ್ಟೂರಾದ ಬನವಾಸಿಯನ್ನು ಸ್ಮರಿಸುತ್ತಾನೆ. ಅದರಂತೆ ಇಂಗಳೇಶ್ವರದ ಯುವ ಕವಿ ಸಾಹಿತಿ ನಾಗಣ್ಣ ಮಹಾದೇವಪ್ಪ ಚಿಗರಿ ಇವರು ಕೂಡಾ ತನ್ನ ಸ್ವ ಗ್ರಾಮವನ್ನು ಪ್ರೀತಿಸುತ್ತಾನೆ ಸ್ಮರಿಸುತ್ತಾನೆ ಹಿರಿಮೆಯನ್ನು ಹೊಗಳುತ್ತಾನೆ. ಇದಕ್ಕೂ ಮುಂಚೆ ಇದೇ ತವರೂರಿನವರಾದ ಶ್ರೀಮತಿ ಪಾರ್ವತಿ ಸಿ ಚೌಕಿಮಠ ಪ್ರಾಚಾರ್ಯರು ಆರ್ ಡಿ ಪಾಟೀಲ ಕಾಲೇಜು ಸಿಂದಗಿಯವರು "ಇಂಗಳೇಶ್ವರ ಗ್ರಾಮ ಚರಿತ್ರೆ" ಬರೆದಿದ್ದಾರೆ. ನಾಗಣ್ಣ ಚಿಗರಿ ಇವರ "ಇಂಗಳೇಶ್ವರ ಗಿರಿ ಅಳಿಯದು ಸಿರಿ" ಎಂಬ ಗ್ರಂಥವನ್ನು ಅವಲೋಕಿಸಿದಾಗ ನನಗೆ ಬಸವಣ್ಣನವರ ಒಂದು ವಚನ ಕರಿಯ ಕನ್ನಡಿಯೊಳಗಡಿದಂತೆ ನೀ ಎನ್ನೊಳಡಗಿರುವೆ ಕೂಡಲ ಸಂಗಮದೇವ ಎಂಬ ವಚನ ನೆನಪಿಗೆ ಬಂದಿತು ಈ ಪುಸ್ತಕ ಕೇವಲ ಇಂಗಳೇಶ್ವರ ಕ್ಷೇತ್ರಕ್ಕೆ ಸೀಮಿತವಾಗಿರದೇ ಇಂಗಳೇಶ್ವರಕ್ಕೆ ಸಂಬಂಧಿಸಿದ ಪ್ರಾಚೀನ ಕಾಲದ ಇತಿಹಾಸ ಹಾಗೂ ಧಾರ್ಮಿಕ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಸಂಗತಿಗಳನ್ನು ಇದರಲ್ಲಿ ವಿವೇಚಿಸಿರುವದು ಈ ಕೃತಿಯ ವಿಶೇಷವಾಗಿದ್ದರಿಂದ ಈ ಕವಿಯ ಜಾಣ್ಮೆಯನ್ನು ಹಾಗೂ ಆಳವಾದ ಅಧ್ಯಯನವನ್ನು ಎತ್ತಿ ತೋರಿಸುತ್ತದೆಂಬುದರಲ್ಲಿ ಎರಡು ಮಾತಿಲ್ಲ. ಮಧ್ಯಶಿಲಾಯುಗ, ಅಂತ್ಯ ಹಳೆ ಶಿಲಾಯುಗ, ತಾಮ್ರಶಿಲಾಯುಗದ ವರ್ಣನೆಯನ್ನು ಹಾಗೂ ಆಯಾ ಕಾಲಕ್ಕೆ ಆಗಿಹೋದ ರಾಜ ಮಹಾರಾಜರ ಸಾಮ್ರಾಟರ ಅರಸೊತ್ತಿಗೆಯನ್ನು ತನ್ನ ಅಧ್ಯಯನದಿಂದ ತಿಳಿದ ಮಟ್ಟಿಗೆ ವಿವೇಚಿಸಿದ್ದಾರೆ. ಮೌರ್ಯಸಾಮ್ರಾಜ್ಯ, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು ಕಲಚೂರಿಗಳು ಮತ್ತು ಸೇವುಣರ ಸಾಮ್ರಾಜ್ಯದ ವರ್ಣನೆ ಮಾಡುತ್ತಾ ಹೋಗುತ್ತಾರೆ. ಆಯಾ ಕಾಲದಲ್ಲಿ ಆಯಾ ರಾಜ ಮಹಾರಾಜರಲ್ಲಿ ಪ್ರಸಿದ್ಧರಾದ ನಾಯಕರ ಸಂಕ್ಷಿಪ್ತ ಜೀವನ ಚರಿತ್ರೆ ಸಾಹಸ ಯಶೋಗಾಥೆಯನ್ನು ವಿವರಿಸುವದರಲ್ಲಿ ಹಿಂದೆ ಬಿದ್ದಿಲ್ಲ. ವಿಶೇಷವಾಗಿ ಸ್ವ ಗ್ರಾಮ ಇಂಗಳೇಶ್ವರದ ಪೂರ್ವ ಇತಿಹಾಸ ಹಾಗೂ ಅದರ ಪಾವಿತ್ರತೆ ಮಣ್ಣಿನ ವರ್ಣನೆ ಮಾಡುವದರೊಂದಿಗೆ ಜೈನರ ಕಾಲದಲ್ಲಿ ಆಗಿ ಹೋದ ಅಗ್ಗಳ ಮಹಾಕವಿಯ ಬಗ್ಗೆ ಕೂಲಂಕೂಷವಾಗಿ ಚರ್ಚಿಸಿದ್ದಾರೆ. ಅದಲ್ಲದೆ ಶೈವರ ಆಳ್ವಿಕೆಯ ಪ್ರಾಬಲ್ಯದಿಂದ ಜೈನ ಸಾಮ್ರಾಜ್ಯ ಪತನವಾಗಿದ್ದು ಇಲ್ಲಿಯ ಶೈವ ಸಾಮ್ರಾಜ್ಯದಲ್ಲಿ



ಕಟ್ಟಿಸಿದ ದೇವಾಲಯ ವರ್ಣನೆ ಆದಿ ರೇಣುಕರ ಸಂಚಾರದಿಂದ ಮಾರ್ಪಾಡಾದ ಧಾರ್ಮಿಕ ಹಿನ್ನೆಲೆ ಅಲ್ಲದೆ ಜಗದ್ಗುರು ಶ್ರೀ ರೇವಣಸಿದ್ಧರ ಮಹಿಮೆಯನ್ನು ಹೃದಯಂಗಮವಾಗಿ ಚಿತ್ರಿಸುವಲ್ಲಿ ಹಿಂದೆ ಬಿದ್ದಿಲ್ಲ. ಅವರ ಮಹಿಮೆಯಿಂದ ಇಂಗಳೇಶ್ವರದಲ್ಲಿ ಹೂವಿನ ಮಳೆ ಹಾಗೂ ಬಂಗಾರದ ಬೆಳೆ ಬಂದಿತೆಂದು ವರ್ಣಿಸಿದ್ದಾರೆ. ಇದರ ನಂತರ ಇಂಗಳೇಶ್ವರದ ಸುಂದರ ಭಕ್ತಿ ಪರಂಪರೆಯಲ್ಲಿ ಜಗಜ್ಯೋತಿ ಬಸವಣ್ಣನವರ ಹುಟ್ಟು ಹಾಗೂ ಅವರು ಮಾಡಿದ ಧಾರ್ಮಿಕ ಸಾಮಾಜಿಕ ಸಪ್ತ ಕ್ರಾಂತಿಗಳನ್ನು ಕೂಲಂಕುಷವಾಗಿ ಜಾಣ್ಮೆಯಿಂದ ಚಿತ್ರಿಸಿದ್ದಾರೆ. ಅದು ಅಲ್ಲದೆ, ಅಕ್ಕನಾಗಮ್ಮ, ಚನ್ನಬಸವಣ್ಣ, ಹಾಗೂ ಹಲವಾರು ಪವಾಡ ಪುರುಷರ ಬಗ್ಗೆಯೂ ಸಹ ಉಲ್ಲೇಖಿಸಿದ್ದಾರೆ.

ಇವರು ಒಂದು ಹೆಜ್ಜೆ ಮುಂದುಹೋಗಿ ಊರಲ್ಲಿರುವ ಪ್ರಾಚೀನ ದೇವಾಲಯಗಳ ವರ್ಣನೆಯನ್ನು ಸುಂದರವಾಗಿ ಚಿತ್ರಿಸಿದ್ದಲ್ಲದೆ, ಪಾರಂಪರಿಕ ಗ್ರಾಮದೇವರು ಹಾಗೂ ಸಂಪ್ರದಾಯ ದೇವರುಗಳನ್ನೂ ಬಿಡದೆ ಚಿತ್ರಿಸಿದ್ದಾರೆ.

ಒಟ್ಟಾರೆ ಹೇಳುವದಾದರೆ ಇಂಗಳೇಶ್ವರ ಗ್ರಾಮದ ಐತಿಹಾಸಿಕ ಸಾಮಾಜಿಕ ಸಾಂಸ್ಕೃತಿಕ ಹಾಗೂ ೧೨ ನೇಯ ಶತಮಾನದಲ್ಲಿ ಶರಣರ ಕ್ರಾಂತಿ ಹಾಗೂ ಸಾಹಿತ್ಯದ ಎಲ್ಲವನ್ನು ಈ ಪುಟ್ಟ ಗ್ರಂಥದಲ್ಲಿ ಹೃದಯನ್ಮಯವಾಗಿ ಚಿತ್ರಿಸುವಲ್ಲಿ ಯಶಸ್ವಿಯಾಗಿದ್ದಾರೆ. ಇದು ಅವರ ಮೊದಲ ಕೃತಿಯಾದರೂ ಒಳ್ಳೆಯ ವಿವೇಚನಾತ್ಮಕ ಹಾಗೂ ಪರಿಣತೆಯಿಂದ ಕೂಡಿದೆ. ಇವರ ಕೆಲವು ಕವನಗಳು ಸಂಪಾದನೆ ಕೃತಿಗಳಲ್ಲಿ ಪ್ರಕಟವಾಗಿರುವದು ಅವರ ಜಾಣ್ಮೆಯನ್ನು ಎತ್ತಿ ತೋರಿಸುವದು. ಈ ಯುವ ಸಾಹಿತಿಯ ಪ್ರತಿಭೆ ನೋಡಿದರೆ ಮುಂದೆ ಇವರು ಒಳ್ಳೆಯ ಕವಿಯಾಗಬಲ್ಲರು.

"ಈ ಮೈಂಡ್ ಕಂಪ್ಯೂಟರ್ ಸೆಂಟ್‌ರ" ನಡೆಸುತ್ತಿರುವ ಇವರು ಒಳ್ಳೆಯ ಶ್ರದ್ಧೆಯಿಂದ ಕೆಲಸ ಮಾಡುವವರು, ಸ್ವಂತ ಕಾಯಕದೊಂದಿಗೆ. ಸಾಹಿತ್ಯ ಅಭಿರುಚಿ ಹೊಂದಿ ಕನ್ನಡಾಂಬೆಯ ಸಾಹಿತ್ಯ ಸೇವೆಗೈಯುತ್ತಿರುವದು ಸಂತೋಷದ ಸಂಗತಿ. ಇದೇ ರೀತಿ ಸಾಹಿತ್ಯ ಸೇವೆಯಲ್ಲಿ ಮುಂದುವರೆದು ಕನ್ನಡಮ್ಮನ ಮುಡಿಗೆ ಇನ್ನೂ ಒಳ್ಳೆಯ ಕೃತಿಗಳನ್ನು ಅರ್ಪಿಸಲಿ ಹಾಗೂ ಆ ರೀತಿ ಶ್ರೀ ಸಿದ್ಧಲಿಂಗೇಶನು ಆಶೀರ್ವದಿಸಲೆಂದು ಪ್ರಾರ್ಥಿಸುತ್ತಾ ಎನ್ನ ಭಾವ ತೋರಣ ಮುಗಿಸುತ್ತೇವೆ.

**ಶ್ರೀ ಗುರು ಕೃಪಾ**
**ಶಿವಯೋಗಿ**

**– ಈರಣ್ಣ ಗೋ ಬೆಕಿನಾಳ**

# ಅರಿಕೆ

ನಾಗಣ್ಣ ಮಾಹಾದೇವಪ್ಪ ಚಿಗರಿ ಆದ ನಾನು ಈ ಸಾಹಿತ್ಯದ ಕೃಷಿಯಲ್ಲಿ ತೊಡಗಿಸಿಕೊಂಡಿದ್ದು ಹೈಸ್ಕೂಲಿನಲ್ಲಿ. ಆದರೆ ಅದು ಹೆಮ್ಮರವಾಗಿ ಬೆಳೆದಿದ್ದು ೨೦೦೭ ರಿಂದ ೨೦೧೦ ಅವಧಿಯ ಪದವಿ ಹಂತದಲ್ಲಿ ಬೇರೆಯವರು ಬರೆದ ಪುಸ್ತಕದಲ್ಲಿ ನನ್ನ ಕವನವು ಇದ್ದವು. ಅಂದಕಾರದ ಜಗತ್ತಿಗೆ ಜ್ಯೋತಿಯಾಗಿ, ಕ್ರಾಂತಿಯ ಕಿಡಿಯನ್ನು ಹಚ್ಚಿ, ಸಮಾನತೆ ಸಾರಿದ ನಮ್ಮೂರ ಬಗ್ಗೆ ಒಂದು ಪುಸ್ತಕ ಬರೆಯಬೇಕು ಎಂದು ಹಲವಾರು ವರ್ಷಗಳ ಬಯಕೆಯೂ ಸಹ ನನ್ನಲ್ಲಿತ್ತು. ಅದಕೋಸ್ಕರ ೨೦೦೯ ರಲ್ಲಿ ರೀಲ್ ಕ್ಯಾಮರಾದೊಂದಿಗೆ ಇಡೀ ಊರನ್ನು ಸುತ್ತಿ ಹಾಗೂ ಊರ ಸೀಮೆಯ ದೇವರನ್ನು ನೋಡಿ ಪೋಟೋಗಳನ್ನು ತಗೆದು ಇತಿಹಾಸವನ್ನು ಸಂಗ್ರಹಿಸಿಕೊಂಡಿದ್ದೆ. ಆದರೆ ನನಗೆ ಯಾವುದೇ ಉದ್ಯೋಗವಿಲ್ಲದ ಕಾರಣ ನನಗೆ ಕೃತಿ ಬಿಡುಗಡೆ ಮಾಡಲು ಆಗಲಿಲ್ಲ. ಮನದ ಬಯಕೆ ನನ್ನನ್ನು ಕಾಡುತ್ತಿತ್ತು. ನಾನು ನನ್ನ ೩೨ನೇ ವರ್ಷದ ಹುಟ್ಟಿದ ಹಬ್ಬದಂದು ಒಂದು ಯೋಚನೆ ಬಂದಿತು ಅಂಗಡಿಯ ವ್ಯಾಪಾರದಲ್ಲಿ ಮೊದಲ ಬಂದ ಬಾಣಗಿ (ಮೊದಲ ಗಿರಾಕಿ ಕೊಟ್ಟ ಹಣ) ಹಣದಿಂದಾದರೂ ಒಂದು ಕೃತಿಯನ್ನು ಹೊರತರಬೇಕೆಂದು ದೇವರ ಹುಂಡಿಯ ರೂಪದಲ್ಲಿ ಒಂದು ಡಬ್ಬಿಯ ಮಾಡಿ ದಿನಾಲು ಅದಕ್ಕೆ ಹಣ ಹಾಕಿ ಆ ಹಣದಿಂದ ಪುಸ್ತಕವನ್ನು ಹೊರತರಬೇಕೆಂಬ ಅಚಲ ನಿರ್ಧಾರದಿಂದಲೇ ಮೂಡಿಬಂದ ಕೃತಿಯೇ "ಇಂಗಳೇಶ್ವರದ ಗಿರಿ ಅಳಿಯದು ಸಿರಿ" ಈ ಪುಸ್ತಕವನ್ನು ೧೫-೨೦ ಪೇಜಿನಲ್ಲಿ ಮಾಡಿಸಬೇಕು ನನ್ನ ಹತ್ತಿರ ಕೂಡಿ ಇಟ್ಟಿರುವ ಹಣ ಸುಮಾರು ೧೫ ರಿಂದ ೧೮ ಸಾವಿರವಾಗಬಹುದು ಎಂದು ಕೊಂಡಿದ್ದೆ. ಆದರೆ ಆ ಗುರು ರೇವಣಸಿದ್ದರ ಬಯಕೆಯೇ ಬೇರೆಯಾಗಿತ್ತು ನಾ ಕೂಡಿ ಇಟ್ಟ ಹಣ ೨೪೧೦೧ ಆಗಿದ್ದವು ಆದರಿಂದಲೆ. ಈ ಪುಸ್ತಕಕ್ಕೆ ಇನ್ನಷ್ಟು ಪುಟಗಳು ಸೇರಿದವು.

ಈ ಕೃತಿಗೆ ಹಲವಾರು ಜನರು ನನಗೆ ಸಹಕಾರ ನೀಡಿದ್ದಾರೆ. ಅದರಲ್ಲಿ ಮುನ್ನುಡಿ ಬರೆದು ಹರಸಿದ ಶ್ರೀ ಈರಣ್ಣ ಗೋ ಬೆಕಿನಾಳ, ಬೆನ್ನುಡಿ ಬರೆದು ಪ್ರೋತ್ಸಾಹಿಸಿದ ಶ್ರೀ ಕೆ.ಎಸ್ ಬಾಗೇವಾಡಿ ಶಿಕ್ಷಕರು, ಹಾಗೂ ನನಗೆ ೨೦೧೦ ರಲ್ಲಿ ಗುಡಿಗಳ ಪೋಟೊ ತಗೆಯಲು ಕ್ಯಾಮರಾ ಕೊಟ್ಟ ಗೆಳತಿ, ನನ್ನ ಜೊತೆ ಎಲ್ಲಾ ಗುಡಿಗಳನ್ನು ತಿರುಗಾಡಿದ ಗೆಳೆಯ ಭೀಮು ಹುಡೇದ, ಇತಿಹಾಸದ ಪರಿಚಯ ಹೇಳಿದ ದಿ॥ ಶ್ರೀ ಮಾದೇವಪ್ಪ ಶೇಕಣ್ಣಿ, ಶ್ರೀ ಲಗಮಣ್ಣ ಪೂಜಾರಿ, ಶ್ರೀ ಯಲ್ಲಪ್ಪ ಶೇಖಣ್ಣಿ, ಶ್ರೀ ಹಣಮಂತ ವಡ್ಡರ, ಶ್ರೀ ಈಶ್ವರಪ್ಪ ಹಳ್ಳಿ, ಶ್ರೀ ಶಿವಪ್ಪ ಗಿ ಅವಟಿ, ಶ್ರೀ ಸಿದ್ದಪ್ಪ ಹದಿಮೂರ, ಶ್ರೀ ಸಣ್ಣಗೌಡ್ರು, ಹಣಮಂತ್ ಕಠಾರಿ(ಕುರುಣದ) ಶಿಕ್ಷಕರು ನನ್ನ ಗೆಳೆಯರಾದ ಮುತ್ತು ಬಡಿಗೇರ, ಮಾಹಾಂತೇಶ ಪೂಜಾರಿ (ಗುಡ್ಡ), ಧರೇಶ, ಕಾಂತೇಶ, ಶ್ರೀಮಂತ, ಪ್ರಕಾಶ, ಸಿದ್ದಲಿಂಗ, ಮಹೇಶ, ಮುದುಕು,ಉಮೇಶ ಮಲ್ಲು, ಸುನೀಲ, ರೇವಣಸಿದ್ಧ, ಭೀಮು ಕಡಗೋಲ, ಮರೆಯಾದ ಮುತ್ತು ದಿ॥ ಹಣಮಂತ ಮನಹಳ್ಳಿ ಕೆಂಚು ಅರವಿಂದ ಪರಸು ಶರಣು ನಾಗೇಶ ಮಾದರ, ಪರಶುರಾಮ ಮಾದರ, ಮಲ್ಲಪ್ಪಮಾವ ಕೋಲಕಾರ, ಮುಂತಾದ ಸ್ನೇಹಿತರನ್ನು ಮರೆಯಲಾರೆ.

ನೀರಿನಲ್ಲಿ ಮುಳುಗುವವನಿಗೆ ಹುಲ್ಲು ಕಡ್ಡಿ ಆಸರೆಯಾದಂತೆ ಮನದ ತೊಳಲಾಟವನ್ನು ನೀಗಿಸಿದವರು ವಾಯ್ ಕೆ ಪತ್ತಾರ (ಮುತ್ತು) ಶಿಕ್ಷಕರು ಮುತ್ತಗಿ, ವಾಸುದೇವ ಬಡಿಗೇರ ಉಪನ್ಯಾಸಕರು ಹಾಗೂ ಇತಿಹಾಸದ ಮಾರ್ಗವನ್ನು ತೋರಿಸಿದವರು ಎಂದರೆ ಶ್ರೀ ಬಿ ಎಸ್ ಪಾಟೀಲ ಎಂ.ಎ – ಪಿ.ಎಚ್.ಡಿ ವಿಜಯಪುರ, ಹುಟ್ಟು ಹೋರಾಟಗಾರ ಸದಾ ಸಮಾಜದ ಕಳಕಳಿಯ ವ್ಯಕ್ತಿ ಅರವಿಂದ ಕೃಷ್ಣಾಜಿ ಕುಲಕರ್ಣಿ ಕಾರ್ಯದರ್ಶಿ ಅಖಂಡ ಕರ್ನಾಟಕ ರೈತ ಸಂಘ ಈ ಪುಸ್ತಕ ಹೊರ ಬರಲು ಅವರ ಸಹಕಾರ ಅಪಾರ ಹಾಗೂ ಅದರಂತೆ ನಮ್ಮ ಓಣಿಯ ಎಲ್ಲಾ ಗೆಳೆಯರು ನನ್ನ ಜೊತೆ ಒಡನಾಟ ಇಟ್ಟುಕೊಂಡ ಎಲ್ಲಾ ಗೆಳೆಯರಿಗೂ ಮತ್ತು ಸಮಸ್ತ ಗ್ರಾಮದ ಇತಿಹಾಸ ತಿಳಿಸಿಕೊಟ್ಟ ಹಿರಿಯರಿಗೆ ಧನ್ಯವಾದಗಳು

ನನ್ನ ಜೀವನದಲ್ಲಿ ಮುಂದೆ ಬರಲು ಕಾರಣರಾದ ಪ್ರಾಥಮಿಕ ಶಾಲೆಯಲ್ಲಿ ಅಕ್ಷರದ ಜ್ಞಾನ ನೀಡಿದ ಶ್ರೀ ಶಾಂತಾಬಾಯಿ ಉಕ್ಕಲಿ ಮತ್ತು ಶ್ರೀ ಎಸ್ ಎಸ್ ಜಾಡರ ಗುರುಮಾತೆಯರು ಹಾಗೂ ಶಿಕ್ಷಕ ವೃಂದಕ್ಕೆ ವಂದನೆಗಳು. ಪ್ರಾಥಮಿಕ ಶಾಲೆಯ ಎಲ್ಲಾ ಗೆಳೆಯರಿಗೂ ಹಾಗೂ ಹೈಸ್ಕೂಲ ಶಿಕ್ಷಕರಿಗೂ ಪ್ರಥಮ ಪಿಯುಸಿಗೆ ಬರಲು ಕಾರಣರಾದ ಮಹೇಂದ್ರಸ್ವಾಮಿ ಪಂಚಾಳ, ರಾಯಪ್ಪ ನಾಯ್ಕೊಡಿ, ನರಸಲಗಿಯ ಗೆಳೆಯ ರವಿ ಪವಾರ ಅಶೋಕ ಬಡ್ಡಿವಡ್ಡರ ಇವರೆಲ್ಲರಿಗೂ ಧನ್ಯವಾದಗಳು ಅದರಂತೆ ಪದವಿಯಲ್ಲಿದ್ದಾಗ ಸಿಂದಗಿಯ ಪತ್ರಕರ್ತರಾದ ಇಂದುಶೇಖರ ಮಣೂರ ಮಾರ್ಗದರ್ಶಕರಾದರೆ, ಸಂಪತ್‌ಕುಮಾರ ಸಜ್ಜನ ಕಂಪ್ಯೂಟರ್ ಕಲಿಸಿದ ಗುರುಗಳು, ಸಾಹಿತ್ಯಕ್ಕೆ ಸ್ಪೂರ್ತಿ ನೀಡಿದ ಭೀಮು, ವಿಷ್ಣು ದೊಡ್ಡಮನಿ, ಶಿವು ರೊಟ್ಟಿ ಪೋಲಿಸ್ ಇಲಾಖೆ, ಅರುಣ ಕೊಂಡಗೂಳಿ ಪವರ್ ನ್ಯೂಸ್ಯ ವರದಿಗಾರರು, ಕಾಶಿಲಿಂಗ ಬೂದಿಹಾಳ ಪೋಲಿಸ್ ಇಲಾಖೆ, ಹಾಗೂ ನನ್ನ ಸಮಸ್ತ ಸಿಂದಗಿಯ ಗೆಳೆಯರ ಬಳಗಕ್ಕೂ ಚಿರಋಣಿ , ಬಾಗೇವಾಡಿ, ಸಿಂದಗಿ, ಹಾಗೂ ಬೆಂಗಳೂರಿನ ಗ್ರಂಥಪಾಲಕರಿಗೆ ಚಿರಋಣಿಯನ್ನು ಹೇಳುತ್ತೇನೆ. ಮತ್ತು ಬೆಂಗಳೂರಿಗೆ ಪರಿಚಯಿಸಿದ ಪರಮಾನಂದ ಕುರುಣದ, "ಒಂದು ಬಾಗಿಲು ಮುಚ್ಚಿದರೆ ಇನ್ನೊಂದು ಬಾಗಿಲು ತೆರೆಯುತ್ತದೆ" ಎಂದು ತಿಳಿಸಿದ ಶ್ರೀ ಪಿ ಎಸ್ ಐ ವೆಂಕಟೇಶಯವರು ನನ್ನ

ಜೊತೆ ಹೆಗಲಿಗೆ ಹೆಗಲು ಕೊಟ್ಟು ನನ್ನ ವ್ಯಾಪಾರಕ್ಕೆ ಸಹಕಾರ ನೀಡಿದ ಗೆಳೆಯ ಮಾಹಾನಿಂಗ ಅವಟಿ ಹಾಗೂ ಮಾರ್ಗದರ್ಶಕರಾದ ಶಿವಾನಂದ ಶಿರಣಗಾರ, ಅರವಿಂದ ನಂದಿ, ಉಮೇಶ ತಳವಾರ, ಸಚಿನ ಮಠ (ತೆಲಸಂಗ) ಹಾಗೂ ನನ್ನ ಪ್ರಾಥಮಿಕ ಶಾಲೆಯ ಗೆಳೆಯರಾದ ಸಾಯಬಣ್ಣ ಡಿಗ್ಗಾವಿ, ಅಶೋಕ ಬಂಡ್ಡಿವಡ್ಡರ, ಶರಣು ಜೇಳಜಿ,ಅರವಿಂದ ನಂದಿ, ಹವಳೆಪ್ಪ ಅವಟಿ, ಮಲ್ಲು ಅವಟಿ,ಕಾಶಿನಾಥ ಹದಿಮೂರ, ಚಂದ್ರು ಹದಿಮೂರ, ಚಿದಾನಂದ ಹದಿಮೂರ,ಪ್ರಶಾಂತ ಐಗಳಿ,ಸಂಗು ಸಜ್ಜನ,ಶಾಂತು ಹೂಗಾರ ಚಂದ್ರು ದಳವಾಯಿ ಕಾಂತೇಶ ಪೂಜಾರಿ ಪೋಲಿಸ್ ಹಾಗು ನನ್ನ ಯಶಶ್ವಿಗೆ ಸಹಕರಿಸಿದ ನನ್ನ ಕುಟುಂಬಕ್ಕೂ ಹಾಗೂ ನನ್ನ ಊರಿನ ಎಲ್ಲರಿಗೂ ಕೋಟಿ ಕೋಟಿ ನಮನ ಸಲ್ಲಿಸುತ್ತೇನೆ. ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಹಲವಾರು ಮಾಹಿತಿ ಹೇಳಿದ ಎಲ್ಲ ಹೃದಯಗಳಿಗೆ ಭಾವಪೂರ್ಣ ನಮನ ಸಲ್ಲಿಸುತ್ತಾ ಈ ಕೃತಿಯನ್ನು ನನ್ನ ವಿದ್ಯೆಗೆ ಬೆಳಕಾದ ನನ್ನ ನನ್ನ ಆರಾಧ್ಯ ದೈವ ಜಗದುರು ರೇವಣಸಿದ್ಧೇಶ್ವರರಿಗೆ ಈ ಮೊದಲ ಕೃತಿಯನ್ನು ಅರ್ಪಣೆ ಮಾಡುತ್ತಿದ್ದೇನೆ.

**– ನಾಗಣ್ಣ ಮಾಹಾದೇವಪ್ಪ ಚಿಗರಿ**

# ಪರಿವಿಡಿ



# ಪೀಠಿಕೆ

ಇಡೀ ಜಗತ್ತೇ ಅಂಧಕಾರದಲ್ಲಿ (ಅನಕ್ಷರಸ್ಥ) ತುಂಬಿರುವಾಗ ಈ ಜಗಕೆ ಶಾಂತಿ ಮಂತ್ರ ಬೋಧಿಸಿ, ಜನರಿಗೆ ಸನ್ಮಾರ್ಗದೆಡೆಗೆ ದಾರಿ ತೋರಿಸಿರುವ ಭವ್ಯ ಭಾರತವು ಹಲವಾರು ಸಾಧು ಸಂತರ ನೆಲೆಬೀಡು. ಕತ್ತಲೆಯಲ್ಲಿ ಇರುವ ಜೀವಿಗೆ ಸೂರ್ಯನ ಕಿರಣ ಹೇಗೆ ಕತ್ತಲೆಯ ಭಯವನ್ನು ಹೋಗಲಾಡಿಸುತ್ತದೇಯೋ ಹಾಗೇ ನನ್ನೂರು ಸಹ ಕತ್ತಲೆ ತುಂಬಿರುವ ಜಗಕೆ ಧರ್ಮದ ದಾರಿ ತೋರಿ ಅಗ್ರಹಾರದಲ್ಲಿಯೇ ಅಗ್ರಗಣ್ಯ ಊರೆನಿಸಿದ್ದು. ಸುಲಿದಷ್ಟು ಕಬ್ಬು, ತೋಡಿದಷ್ಟು ನೀರು, ತಿದ್ದಿದಷ್ಟು ಅಕ್ಷರ, ಹಾಗೆಯೇ ದೇವಾಲಯ ಅಗೆದಷ್ಟು ಚಿನ್ನ, ಬೆಳ್ಳಿ, ಮುತ್ತು, ರತ್ನ ಸಿಗುತ್ತದೆ ಎಂದು ತಿಳಿದ ಅದೆಷ್ಟೋ ವಿದೇಶಿಯರು, ನಮ್ಮ ದೇವಾಲಯಗಳನ್ನು ಭಗ್ನಗೊಳಿಸಿ ತಮ್ಮ ಕ್ರೂರತ್ವವನ್ನು ಜಗಕ್ಕೆ ತೋರಿಸಿದ್ದಾರೆ. ಹಲವಾರು ಕೌತುಕದ ಸ್ಥಳಗಳನ್ನು ಕಂಡ ಬ್ರಿಟೀಷರು ಯಾವ ದೃಷ್ಠಿಕೋನದಿಂದ ಸಂಶೋಧನೆಯನ್ನು ಕೈಕೊಂಡರೋ ಗೊತ್ತಿಲ್ಲ. ಇವರು ೧೮೮೮ ರಲ್ಲಿ ಐತಿಹಾಸಿಕ ದೇವಾಲಯ ಆದಿ ಮಾನವನ ವಾಸಸ್ಥಳ ಹೀಗೆ ಹಲವಾರು ಕ್ಷೇತ್ರದಲ್ಲಿ ಅಧ್ಯಯನ ಮಾಡಲು ಪ್ರಾರಂಭಿಸಿದರು, ಅದಕ್ಕಾಗಿ ಹಲವಾರು ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಸಂಶೋಧನೆಯನ್ನು ಪ್ರಾರಂಭಿಸಿದರು. ಆ ಸಂಶೋಧನೆಯಲ್ಲಿ ಮಧ್ಯ ಶಿಲಾಯುಗ. ಅಂತ್ಯ ಶಿಲಾಯುಗ ಹಾಗೂ ತಾಮ್ರ ಶಿಲಾಯುಗದಲ್ಲಿ ನಮ್ಮ ಇಂಗಳೇಶ್ವರದಲ್ಲಿ ಹಲವಾರು ಕುರುಹುಗಳು ಸಿಕ್ಕವು. ಇದು ನಮ್ಮ ಗ್ರಾಮದ ಹಿರಿಮೆ.

ಭಾರತದ ಮೊದಲ ಸಾಮ್ರಾಜ್ಯವೆಂದರೆ ಮೌರ್ಯ ಸಾಮ್ರಾಜ್ಯ. ಇವರ ಆಳ್ವಿಕೆಯಲ್ಲಿ ಇಡೀ ಭಾರತವೇ ಒಳಪಟ್ಟಿತು. ಇವರು ದಕ್ಷಿಣ ಭಾರತದ ಭಾಗವನ್ನು “ಸುವರ್ಣಗಿರಿ” ಎಂದು ಕರೆಯುತ್ತಿದ್ದರು. ನಮ್ಮ ಊರು ಸಹ ಮಧ್ಯ ಶಿಲಾಯುದಲ್ಲಿಯೇ ಜನರ ವಸತಿ ಇರುವದರಿಂದ ನಮ್ಮೂರನ್ನು ಇವರು ಮೊದಲಿಗೆ ಆಳಿದ ರಾಜರೆಂದು ಕಲ್ಪಿಸಿಕೊಳ್ಳಬಹುದು. ಮುಂದೆ ಆಳಿದ ರಾಜರು ಶಾಸನಗಳಲ್ಲಿ ಜನಮೇಜಯನು ಸ್ಥಾಪಿಸಿದ ಅಗ್ರಹಾರವೇ ಈ ಇಂಗಳೇಶ್ವರ ಇದಕ್ಕೆ ಅವನು ಕಾಶಿಪುರ ಎಂದು ಕರೆದ ನಂತರದಲ್ಲಿ ರೇವಣಸಿದ್ದರ ಕಾಲದಲ್ಲಿ ಭದ್ರಗಿರಿ ಎಂದು ನಂತರ ತಿಂಗಳೇಶ್ವರವೆಂದು ಸದ್ಯ ಇಂಗಳೇಶ್ವರವೆಂದು ನಾನಾ ಹೆಸರುಗಳಿಂದ ಕರೆಯಿಸಿಕೊಂಡಿದೆ. ಶರಣರು – ಸಂತರು, ಕವಿ ಪುಂಗವರು,



ಇಂಗಳೇಶ್ವರ ಗಿರಿ ಅಳಿಯದು ಸಿರಿ

ಸಾಹಿತಿಗಳು, ಶಿಕ್ಷಕರು ಯೋಧರು ಹೀಗೆ ನಾನಾ ತರಹದ ಜನರನ್ನು ತಯಾರಿಸುವ ಕಾರ್ಖಾನೆ ಇಂಗಳೇಶ್ವರ ಎಂದರೆ ತಪ್ಪಾಗಲಿಕ್ಕಿಲ್ಲ. ಹಲವಾರು ಜಾತಿ ಧರ್ಮಗಳ ನೆಲೆ ಬೀಡಾದ ಈ ಗ್ರಾಮ ಭಾರತದ ದೃಷ್ಠಿಯಲ್ಲಿ ದಕ್ಷಿಣ ದಿಕ್ಕಿನಲ್ಲಿರುವ ಕರ್ನಾಟಕ ರಾಜ್ಯದಲ್ಲಿದೆ. ಕರ್ನಾಟಕದ ದೃಷ್ಠಿಯಲ್ಲಿ ಉತ್ತರ ದಿಕ್ಕಿನಲ್ಲಿದೆ. ಇಲ್ಲಿಯ ಜನರು ಶ್ರೀಗಿರಿ ಪರ್ವತಕ್ಕೆ (ಶ್ರೀಶೈಲ) ಕಾಲ್ನಡಿಗೆಯಿಂದ ಕೆಲವೆ ದಿನಗಳಲ್ಲಿ ಹೋಗುವಷ್ಟು ಹತ್ತಿರದಲ್ಲಿದೆ. ಇಲ್ಲಿ ಹಲವಾರು ದೇವಾಲಯ ಇರುವದರಿಂದ ಇದಕ್ಕೆ ದೇವಾಲಯದ ತೊಟ್ಟಿಲು ಎಂದು ಕರೆಯಿಸಿಕೊಂಡಿದೆ. ಇದು ಅಲ್ಲದೆ ಇಂಗಳೇಶ್ವರಕ್ಕೆ ಸಂಬಂಧ ಪಟ್ಟ ಹಲವಾರು ಗಾದೆ ಮಾತುಗಳು, ಹಂತಿ ಪದಗಳು, ಜಾನಪದಗಳು, ಕೆಲವು ದಂಥ ಕತೆಗಳು, ೫ ಓಣಿಗಳು, ಏಳು ಸುತ್ತಿನ ಕೋಟೆ, ಹನ್ನೊಂದು ಅಗಸಿ ಭಾರತ ಸ್ವತಂತ್ರ್ಯಕ್ಕೆ ಹೋರಾಡಿದವರು ಹೀಗೆ ಹಲವಾರು ಅಂಶವನ್ನು ತಿಳಿದಾಗ ನಮ್ಮ ಊರಿನ ಬಗ್ಗೆ ನಮಗೆ ಎಲ್ಲಿಲ್ಲದ ಸಂತೋಷ ಇಮ್ಮಡಿಸುತ್ತದೆ. ಇಂತಹ ಹಲವಾರು ಕೌತುಕಕ್ಕೆ ಆಗರವಾದ ಇಂಗಳೇಶ್ವರದ ಇತಿಹಾಸವನ್ನು ಅಲ್ಪ ಮಟ್ಟಿಗೆ ತಿಳಿದಿದ್ದನ್ನು ನಿಮ್ಮ ಮುಂದೆ ಹಂಚಿಕೊಳ್ಳುತ್ತಿದ್ದೇನೆ.





# ಪೂರ್ವಕಾಲದಲ್ಲಿ ಇಂಗಳೇಶ್ವರ

ಇಂಗಳೇಶ್ವರ (ಭದ್ರಗಿರಿ) ಗ್ರಾಮ ಜನರ ಪ್ರಕಾರ ಊರಿನ ಇತಿಹಾಸ ತೆರೆದುಕೊಳ್ಳುವದೇ ಶ್ರೀ ಗುರು ರೇವಣಸಿದ್ದರ ಕಾಲದಲ್ಲಿ ಸಿದ್ದಪ್ಪ ಮುತ್ಯಾ (ರೇವಣಸಿದ್ದೇಶ್ವರ) ಬಂದಾಗ ಮೊದಲು ಹೂವಿನ ಮಳೆಯಾಯಿತು, ನಂತರ ದುಡ್ಡಿನ ಮಳೆಯಾಯಿತು, ನಂತರ ಬೆಂಕಿಯ ಮಳೆಯಾಗಿ ಇಡೀ ಊರೇ ಸುಟ್ಟುಕೊಂಡು ಹೋಯಿತು” ಬೆಂಕಿ ಮಳೆ (ಜ್ವಾಲಾಮುಖಿ) ಯಾಗಿದ್ದರಿಂದಲೇ ಪ್ರತಿ ಕಲ್ಲಿನಲ್ಲಿ ರಂದ್ರಗಳಿವೆ ಎಂದು ಜನರ ನಂಬಿಕೆ. ಅದರಂತೆ ಬಸವಣ್ಣನವರ ಕಾಲದಲ್ಲಿ ನಡೆದ ದಂತ ಕತೆಗಳ ಬಗ್ಗೆ ಊರಿನ ಎಲ್ಲಾ ಹಿರಿಯರು ಹೇಳುತ್ತಾರೆ. ಇನ್ನು ಕೆಲವು ಹಿರಿಯರು “ನಮ್ಮ ಊರಿನ ದರ್ಗಾದ ಬಳಿ ಬಂಗಾರದ ತೇರು

ಇತ್ತು, ಅದು ಆ ಕಾಲದಲ್ಲಿಯೇ ಮುಳುಗಿದೆ". ಇನ್ನೂ ಅತೀ ವಿರಳ ಜನ ನಮ್ಮ ಇಂಗಳೇಶ್ವರದಲ್ಲಿ ೫ ಓಣಿಗಳು ಇದ್ದವು ಎಂದು ಹೇಳಿದರು ! ಆಗ ಇತಿಹಾಸದ ಪೂರ್ವಕಾಲದಲ್ಲಿ ಊರು ಇರಬಹುದು ಎಂದು ಇದರ ಬಗ್ಗೆ ಆಳವಾದ ಅಧ್ಯಯನ ಕೈಗೊಂಡಾಗ ನನಗೆ ತಿಳಿದ ಸಂಗತಿ ಗ್ರಾಮದ ಪೂರ್ವದಲ್ಲಿ ಕಂಚಗಾರ ಓಣಿ ಪಶ್ಚಿಮದಲ್ಲಿ ಮಣಿಗಾರ ಓಣಿ ಉತ್ತರಕ್ಕೆ ಕಲಾಕಾರರ ಓಣಿ ದಕ್ಷಿಣಕ್ಕೆ ಜೈನರ ಓಣಿ ಇದ್ದವು ಹಾಗೇ ಈಗಿರುವ ಪ್ರದೇಶವು ಗಾಣಿಗರ ಓಣಿ ಇತ್ತೆಂದು. ತಿಳಿಯಿತು.

ನಾನು ಚಿಕ್ಕವನಿದ್ದಾಗ ನಮ್ಮ ತಂದೆಯಾದ ಮಹಾದೇವಪ್ಪ ಭಗವಂತಪ್ಪ ಚಿಗರಿಯವರು ಪಿಂಜಾರ ಗುಡ್ಡದಲ್ಲಿ ಹಲವಾರು ಅವಶೇಷಗಳು ಇವೆ ಎಂದು ಹೇಳುತ್ತಿದ್ದರು. ಆದರೆ ಆಗ ನನಗೆ ತಿಳುವಳಿಕೆ ಬಂದಿರಲಿಲ್ಲ. ಮುಂದೆ ನನಗೆ ನನ್ನ ತಂದೆ ಹೇಳಿದ ಮಾತು ನೆನಪಿಗೆ ಬಂತು ಹಾಗೂ ಗ್ರಾಮದ ಹಿರಿಯರು ಹೇಳಿದ ಮಾತು ನನಗೆ ಇತಿಹಾಸ ಕೆದಕುವ ಹಾಗೆ ಮಾಡಿತು. ಆಗ ನಾನು ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ಹಾಗೂ ಶರಣಮುತ್ಯಾನ ಗುಡಿಯ ಸ್ವಲ್ಪ ದೂರದಲ್ಲಿ ಇರುವ ಕಂಚಗಾರ ಓಣಿ ಇದೆ ಎಂದು ತಿಳಿದು ಹುಡಕಲು ಹೊರಟೆ, ಸುತ್ತಲೂ ಕಪ್ಪು ಮಣ್ಣಿನ ಹೊಲಗಳು ಅದರ ಮಧ್ಯ ಸುಮಾರು ೩ ಎಕರೆಯಷ್ಟು ಪ್ರದೇಶ ಹಾಳು ಮಣ್ಣುಗಳಿಂದ ಕೂಡಿದ ಹೊಲ ಕಾಣ ಸಿಗುತ್ತದೆ ಇಲ್ಲಿ ಹಲವಾರು ಚಿತ್ರವಿಚಿತ್ರ ಕಲ್ಲುಗಳು, ಮನೆಯ ಮಾಳಿಗೆಗಳು, ಗೋಡೆಗಳು ಹೀಗೆ ಹಲವಾರು ಅವಶೇಷಗಳು ಇಂದಿಗೂ ನಮಗೆ ಕಾಣಸಿಗುತ್ತವೆ.





ಇಲ್ಲಿಗೆ ನುರಿತ ಇತಿಹಾಸ ತಜ್ಞರು ಹೆಚ್ಚಿನ ಅಧ್ಯಯನ ಕೈಕೊಂಡರೆ ಇನ್ನೂ ಹೆಚ್ಚಿನ ಐತಿಹಾಸಿಕ ನೆಲೆಗಳು ಸಿಗಬಹುದು. ಅದರಂತೆ ರೇವಣಸಿದ್ದರ ಬೆಟ್ಟದ ಬಳಿ ಜೈನರ ಓಣಿ ಇದೆ ಎಂದು ತಿಳಿಯಿತು. ಇಲ್ಲಿಯು ಸಹ ಹಲವಾರು ಆದಿ





ಮಾನವರು ವಾಸಿಸಿದ ಕುರುಹುಗಳು ಕಾಣ ಸಿಗುತ್ತವೆ. ಹಾಗೆ ಈಗಲೂ ಸಹ ಗ್ರಾಮದಲ್ಲಿ ಮಣ್ಣನ್ನು ಅಗೆಯುವಾಗ ಹಲವಾರು ಕಡೆಯಲ್ಲಿ ಹಳೆ ಕಾಲದ ದೇವರ ಮೂರ್ತಿಗಳು, ಕಂಬಗಳು, ಶಿವಲಿಂಗಗಳು, ಶಾಸನಗಳು, ವೀರಗಲ್ಲುಗಳು ಹೀಗೆ ನಾನಾ ತರಹದ ಕುರುಹುಗಳು ಕಾಣ ಸಿಗುತ್ತವೆ. ಉದಾಹರಣೆಗೆ ಗ್ರಾಮದೇವತೆಯಾದ ಬಾದುಬ್ಬೆ (ಏಳು ಮಕ್ಕಳ ತಾಯಿ), ದೇವಾಲಯದ ಅಕ್ಕಪಕ್ಕ, ಭೀರೇಶ್ವರ ನಗರದ ಹೊಸ ಭೀರೇಶ್ವರ ಗುಡಿ, ಎ.ಪಿ.ಎಂ.ಸಿ, ಸಾರಿಹೊಲ ಹೀಗೆ ಹಲವಾರು ಕಡೆ ಸಿಕ್ಕಿವೆ. ಮೊದಲು ಮನೆಯ ಮಾಳಗಿಗೆ ಮಣ್ಣು ಅವಶ್ಯವಿದ್ದಾಗ ಅಲ್ಲಿ ಅಗೆದಾಗ ಹಲವಾರು ಇತಿಹಾಸ ಕುರುಹುಗಳು ಕಂಡು ಬರುತ್ತಿದ್ದವು ಅವುಗಳನ್ನು ನಾನು ಕಣ್ಣಾರೆ ಕಂಡಿದ್ದೇನೆ.ಅದರಂತೆ ಸಾರಿಹೊಲದಲ್ಲಿಯೂ ಸಹ ಅನೇಕ ಅವಶೇಷಗಳು ಕಂಡು ಬರುತ್ತವೆ. ಇಂಗಳೇಶ್ವರದಲ್ಲಿ ಹಲವಾರು ಐತಿಹಾಸಿಕ ಹಾಗೂ ಸೂಕ್ಷ್ಮ ಸ್ಥಳಗಳು ಇರುವದರಿಂದ ಇತಿಹಾಸಕಾರರು ಊರಿನ ಬಗ್ಗೆ ಅಧ್ಯಯನ ಮಾಡಿರಬಹುದು ಎಂದು ತಿಳಿದುಕೊಂಡು ಇತಿಹಾಸ ಪುಸ್ತಕದೆಡೆಗೆ ಮನಸ್ಸು ವಾಲಿದಾಗ ಅಲ್ಲಿ ಕಂಡ ಊರಿನ ಚಿತ್ರಣ.

ಪ್ರಾಚೀನ ಕಾಲದಲ್ಲಿ ಆದಿ ಮಾನವನು ಗುಡ್ಡದ ತಗ್ಗು, ನದಿಯ ದಡದ ಸಮೀಪ,ವಾಸಿಸುತ್ತಿದ್ದ ದೇಹಕ್ಕೆ ಮರದ ತೊಗಟೆಯನ್ನು ಸುತ್ತಿಕೊಳ್ಳುತ್ತಿದ್ದ ಹಸಿವೆಯನ್ನು ನೀಗಿಸಲು ಹಲವಾರು ಆಯುಧಗಳನ್ನು ಬಳಸುತ್ತಿದ್ದ ಅವನು ಹೇಗೆ ಮಾರ್ಪಾಡಾದ ಎಂದು ಕುತುಹಲದಿಂದ ಆದಿಮಾನವನ ಜೀವನ ಚರಿತೆಯನ್ನು ಮೊದಲಿಗೆ ಅಧ್ಯಯನ ಮಾಡಿದವರೆಂದರೆ ವಿದೇಶಿಯರು. ಭಾರತದ ಪ್ರಾಗತಿಕ ಇತಿಹಾಸದ ಪಿತಾಮಹ ಎಂದು ಕರೆಸಿಕೊಳ್ಳುವ ಬ್ರಿಟೀಷ ಭೂ ವಿಜ್ಞಾನಿ ರಾಬರ್ಟ್ ಬ್ರೂಸ್‌ಪುಟರೇ ರವರು ೧೮೮೮ ರಲ್ಲಿ ಕರ್ನಾಟಕದ ಉತ್ತರ ಭಾಗದಲ್ಲಿರುವ ಬಾಗಲಕೋಟ ಜಿಲ್ಲೆಯ ಬದಾಮಿ ತಾಲೂಕಿನ ಮಲಪ್ರಭ ನದಿ ದಡದಲ್ಲಿರುವ ಖ್ಯಾಡ ಮತ್ತು ಢಾಣಕಶಿರೂರದಲ್ಲಿ ಸುಮಾರು ೨ ಲಕ್ಷ ವರ್ಷಗಳ ಪ್ರಾಚೀನ ವಾದ ಆದಿ ಹಳೆಯ ಶಿಲಾಯುಗ ಹಂತದ ಶಿಲಾಯುಧಗಳನ್ನು ಪತ್ತೆ ಹಚ್ಚಿ ನಮ್ಮ ಭಾಗವು ಇತಿಹಾಸ ಪೂರ್ವದಲ್ಲಿ ಇದೆ ಎಂದು ತಿಳಿಸಿದನು.

### ೧) ಆದಿ ಹಳೆ ಶಿಲಾಯುಗದ ಸಂಸ್ಕೃತಿ (ಕ್ರಿ.ಪೂ (ಸಾ.ಶ) ಸುಮಾರು ೫ ಲಕ್ಷದಿಂದ ೨ ಲಕ್ಷ)

೨) **ಮಧ್ಯ ಹಳೆ ಶಿಲಾಯುಗದ ಸಂಸ್ಕೃತಿ (ಕ್ರಿಪೂ ಸುಮಾರು ೧ ಲಕ್ಷದಿಂದ ೪೦,೦೦೦ ವರ್ಷ)**

೩) **ಅಂತ್ಯ ಹಳೆ ಶಿಲಾಯುಗದ ಸಂಸ್ಕೃತಿ (ಕ್ರಿ.ಪೂ. ೪೦,೦೦೦ ವರ್ಷದಿಂದ ೧೦,೦೦೦ ವರ್ಷದ ವರೆಗೆ)**

೪) **ಸೂಕ್ಷ್ಮ ಶಿಲಾಯುಗ ಸಂಸ್ಕೃತಿ (ಕ್ರಿ.ಪೂ ೧೦,೦೦೦ ವರ್ಷದಿಂದ ೩,೦೦೦ ವರ್ಷದ ವರೆಗೆ)**

೫) **ನೂತನ ಶಿಲಾಯುಗ ಸಂಸ್ಕೃತಿ (ಕ್ರಿ ಪೂ ೩೦೦೦ ವರ್ಷದಿಂದ ೨೦೦೦ ವರ್ಷಗಳ ವರೆಗೆ)**

೬) **ತಾಮ್ರ ಶಿಲಾಯುಗ ಸಂಸ್ಕೃತಿ (ಕ್ರಿ.ಪೂ ೨೦೦೦ ವರ್ಷದಿಂದ ೮೦೦ ವರ್ಷದ ವರೆಗೆ)**

೭) **ಬೃಹತ್ ಶಿಲಾಯುಗ ಸಂಸ್ಕೃತಿ (ಕ್ರಿ.ಪೂ ೧೨೦೦ ವರ್ಷದಿಂದ ೩೦೦ ವರ್ಷಗಳ ವರೆಗೆ)**

**ನಂತರದಲ್ಲಿ ಮೌರ್ಯರು, ಗುಪ್ತರು ಶಕರು ಹೀಗೆ ಮುಂದುವರೆಯುತ್ತದೆ.**

**ಆದಿ ಹಳೆ ಶಿಲಾಯುಗದ ಸಂಸ್ಕೃತಿ (ಸುಮಾರು ೫ ಲಕ್ಷದಿಂದ ೨ ಲಕ್ಷ) :**

ಆದಿ ಶಿಲಾಯುಗದಲ್ಲಿ ಸಂಶೋಧನೆ ನಡೆದಿದ್ದು ಮಲಪ್ರಭನದಿ ದಡ, ಘಟಪ್ರಭನದಿ ದಡ, ಕೃಷ್ಣಾ ನದಿ ದಡದಲ್ಲಿ ಇರುವ ಹಲವಾರು ಹಳ್ಳಿಗಳಲ್ಲಿ ಅಧ್ಯಯನ ನಡೆಸಿದರು ಅವು ಈ ಕೆಳಗಿನಂತಿವೆ :

- **ಮಲಪ್ರಭ** : ನದಿಯ ದಡದ ಖ್ಯಾಡ ಢಾಣಕಶಿರೂರ ಬದಾಮಿ, ನಂದಿಕೇಶ್ವರ, ಶಿವಯೋಗಿ ಮಂದಿರ, ಪಟ್ಟದಕಲ್ಲು, ಚೋಳಚಗುಡ್ಡ ಮುಂತಾದವು.
- **ಘಟಪ್ರಭ** : ನದಿಯ ದಡದ ಅನಗವಾಡಿ, ಯಡಹಳ್ಳಿ, ಆಸಂಗಿ, ಪಡಸಲಗಿ ಮುಂತಾದವು.
- **ಕೃಷ್ಣಾ** : ನದಿಯ ದಡದ ಕೊಲ್ಹಾರ, ಸಂಗಮ, ಆಲಮಟ್ಟಿ, ಸೀತಿಮನಿ, ಯಲಗೂರ, ಯಡಹಳ್ಳಿ ಮುಂತಾದವು.





**ಮಧ್ಯ ಹಳೆ ಶಿಲಾಯುಗದ ಸಂಸ್ಕೃತಿ**
**(ಸುಮಾರು ೧ ಲಕ್ಷದಿಂದ ೪೦,೦೦೦ ವರ್ಷ) :**

೧೯೫೪ ರಲ್ಲಿ ಮಹಾರಾಷ್ಟ್ರದ **ಸಾಂಕಾಲಿಯ** ಅವರಿಂದ ಗುರುತಿಸಲ್ಪಟ್ಟ ಮಧ್ಯ ಶಿಲಾಯುಗದ ಹಂತವನ್ನು **ಸುಂದರ** ಎಂಬುವರು ಸಾಲವಾಡಗಿಯಲ್ಲಿ ಗುರುತಿಸಿ ಸಂಗ್ರಹಿಸಿದರು. ನಂತರದಲ್ಲಿ **ಶೇಷಾದ್ರಿ** ಯವರು ಅಧ್ಯಯನ ಮಾಡಿದರು ನಂತರದಲ್ಲಿ **ಕೆ.ಡಿ ಬ್ಯಾನರ್ಜಿ** ತಮ್ಮಿನಾಳ ನಿವೇಶನ ಗುರುತಿಸಿ, ಅಧ್ಯಯನ ಕೈಕೊಂಡರು.

ಮಾನವನು ಬಳಸುವ ಹಲವಾರು ಅವಶೇಷಗಳ ಅನಗವಾಡಿ ಗೊಳಸಾರ ಮುಧೋಳ ಬೇವಿನಾಳ ಯಲಗೂರ ಸಿದ್ದನಕೊಳ್ಳ ಹೀಗೆ ಹಲವಾರು ಕಡೆ ಸಂಶೋಧನೆ ಕೈಕೊಂಡಾಗ, ಮೂಲ ಕಲ್ಲಿನಿಂದ ತೆಳುವಾದ ಚಕ್ಕೆಗಳನ್ನು ಎಬ್ಬಿಸಿ (ಕಲ್ಲು ಒಡೆದಾಗ ಬರುವ ಪದರು-ಚೊರ್ಚುಗಲ್ಲು) ಅವುಗಳ ಹರಿತವಾದ ಅಂಚನ್ನು ಮತ್ತಷ್ಟು ಚೂಪಾಗಿಸಿ ರಂಧ್ರ ಮಾಡಲು ಅನುವಾಗುವಂತಹ ಚೂಪಾದ ಮೊನೆಗಳು, ಬಾಣದ ಮೊನೆ, ಕಿರು ಕೈಗೊಡಲಿ, ದ್ವಿಮುಖ ಅಲಗು ಮುಂತಾದ ಉಪಕರಣಗಳು ವಿವಿಧ ನೆಲೆಗಳಿಂದ ವರದಿಯಾದವು.

ಇವುಗಳನ್ನು ಪರಿಣಾಮಕಾರಿಯಾಗಿ ಬಳಸಲು ಬೊಂಬು, ಬಿದಿರು ಹಾಗೂ ಮೂಳೆಗಳನ್ನು ಪೂರಕವಾಗಿ ಬಳಸಿಕೊಳ್ಳಲಾಗುತ್ತಿತ್ತು. ಒರೆಯುವ ಚಕ್ಕೆಗಳೇ (ಕಲ್ಲು ಒಡೆದಾಗ ಬರುವ ಪದರು-ಚೊರ್ಚುಗಲ್ಲು) ಈ ಹಂತದ ಪ್ರಧಾನ ಉಪಕರಣವಾಗಿದ್ದು ವಿವಿಧ ಮಾದರಿಯ ಒರೆಯುವ ಚಕ್ಕೆಗಳು **ಇಂಗಳೇಶ್ವರ** ತಮ್ಮಿಹಾಳ,ಬಾಗಲಕೋಟೆ, ಹೆರಕಲ್, ಅನಗವಾಡಿ ಮುಂತಾದ ಕಡೆಗಳಲ್ಲಿ ಬಳಸುತ್ತಿದ್ದರು ಈ ಉಪಕರಣಗಳು ಮಧ್ಯ ಹಳೆ ಶಿಲಾಯುಗದಲ್ಲಿ ವಿಪುಲವಾಗಿ ಲಭಿಸಿವೆ.

ಇಲ್ಲಿ ವಿಶ್ಲೇಷಿಸುವ ಅಂಶವೇನೆಂದರೆ ಆದಿ ಮಾನವ ಹಸಿವೆಯನ್ನು ನೀಗಿಸಲು ಪ್ರಾಣಿಯನ್ನು ಕೊಂದು ತಿನ್ನುತ್ತಿದ್ದ. ಪ್ರಾಣಿಯನ್ನು ಹೇಗೆ ಕೊಲ್ಲುವದು ಎಂದು ಜನ ಆ ಕಾಲದಲ್ಲಿ ಯೋಚಿಸುತ್ತಿರುವಾಗ ಪ್ರಾಣಿ ಕೊಲ್ಲಲು ಚೊರ್ಚುಗಲ್ಲನ್ನು ಚೂಪಾಗಿಸಿ ಅದಕ್ಕೆ ರಂದ್ರ ಕೊರೆದು ಆಯುಧವನ್ನು ತಯಾರಿಸುವ ಕೆಲವೇ ಕೆಲವು ಹಳ್ಳಿಗಳಲ್ಲಿ ನನ್ನ ಇಂಗಳೇಶ್ವರ ಒಂದು

**ಅಂತ್ಯ ಹಳೆ ಶಿಲಾಯುಗದ ಸಂಸ್ಕೃತಿ**
**(ಕ್ರಿ.ಪೂ. ೪೦,೦೦೦ ವರ್ಷದಿಂದ ೧೦,೦೦೦ ವರ್ಷದ ವರೆಗೆ) :**

ಮಧ್ಯ ಶಿಲಾಯುಗದ ನಂತರ ಕ್ರಿ.ಪೂ ೪೦,೦೦೦ ವರ್ಷದಿಂದ ೧೦,೦೦೦ ಈ ಕಾಲವನ್ನು

ಅಂತ್ಯ ಹಳೆ ಶಿಲಾಯುಗ ಎಂದು ಕರೆಯುವರು. ಈ ಸಂಸ್ಕೃತಿಯ ಉಪಕರಣಗಳು ನೀಳ ಅಲಗು, ಕೊರೆಯುವ ಮೊನೆ, ವಿವಿಧ ಗಾತ್ರದ ಒರೆಯುವ ಚಕ್ಕೆ, ಡಬ್ಬಣ,ಮೊನೆ, ಚಕ್ಕೆ, ರಂದ್ರಕಾರಕ ಮುಂತಾದವುಗಳಾಗಿದ್ದರೂ ನೀಳ ಅಲಗು ಮತ್ತು ಮೊನೆ ಪ್ರಧಾನ ಉಪಕರಣಗಳು ಆದ್ದರಿಂದ ಈ ಸಂಸ್ಕೃತಿಗೆ **"**ಅಲಗು ಮೊನೆ ಸಂಸ್ಕೃತಿ**"** ಎಂಬ ಹೆಸರಿನಿಂದ ಕರೆದರು.ಇಲ್ಲಿ ಸುಮಾರು ೨೦ ನಮೂನೆ ಉಪಕರಣಗಳು ಬಳಸಲಾಗುತ್ತಿತ್ತು ಹಾಗೂ ಮಾತೃಪೂಜೆ, ಮೀನು ಹಿಡಿಯುವ ತಂತ್ರ ಅವರಿಗೆ ಗೊತ್ತಿತ್ತು. ಇವುಗಳೊಂದಿಗೆ ಎಲುಬು, ಜಿಂಕೆಯ ಕವಲುಕೊಂಬುಗಳಿಂದ ಮಾಡಿದ ಉಪಕರಣವನ್ನು ಸಹ ಉಪಯೋಗಿಸುತ್ತಿದ್ದರು, ಈ ಯುಗದಲ್ಲಿ ಈ ಎಲ್ಲಾ ಉಪಕರಣ ಸಿಕ್ಕ ಸ್ಥಳವೆಂದರೆ ಮೊದಲಿಗೆ **ಇಂಗಳೇಶ್ವರ,** ಕೋವಳ್ಳಿ, ಐಹೋಳೆ, ಸಿದ್ದನಕೊಳ್ಳ, ಹಳೇಕಡಿವಾಳ, ಉಡಚಣ ಮತ್ತು ಮುಂತಾದ ಊರುಗಳು.

ಇಲ್ಲಿ ವಿಶ್ಲೇಸಿಸುವ ಅಂಶವೇನೆಂದರೆ ಮೀನು ಹಿಡಿಯುವ ತಂತ್ರದ ಜೊತೆಗೆ ೨೦ ನಮೂನೆಯ ಆಯಧಗಳನ್ನು ನನ್ನೂರಿನಲ್ಲಿ ಬಳಸುತ್ತಿದ್ದರು ಎಂದು ತಿಳಿಯುತ್ತದೆ.

**ತಾಮ್ರ ಶಿಲಾಯುಗ ಸಂಸ್ಕೃತಿ**
**(ಕ್ರಿ.ಪೂ. ೨೦೦೦ ವರ್ಷದಿಂದ ೮೦೦ ವರ್ಷದ ವರೆಗೆ) :**

ನೂತನ ಶಿಲಾಯುಗ ಸಂಸ್ಕೃತಿಯ ಉತ್ತರಾರ್ಧ ಭಾಗದಲ್ಲಿ ಶಿಲಾಯುಗಗಳೊಂದಿಗೆ ಕಂಚು ಮತು ತಾಮ್ರದ ಚಪ್ಪಟೆ ಕೊಡಲಿ,ಉಳಿ ಮುಂತಾದ ಉಪಕರಣಗಳ ಜೊತೆ ಜೊತೆಗೆ ಬಳಕೆಯಲ್ಲಿ ಇದ್ದುದರಿಂದ ಈ ಸಾಂಸ್ಕೃತಿಕ ಘಟ್ಟವನ್ನು ತಾಮ್ರ ಶಿಲಾಯುಗ ಎಂದು ಕರೆಯುವರು. ಇಂತಹ ೩೨ ಸ್ಥಳಗಳನ್ನು ಗುರುತಿಸಿದ್ದು ಅವುಗಳಲ್ಲಿ **ಇಂಗಳೇಶ್ವರ,** ಕೂಚಬಾಳ, ಗಡಿಸೋಮನಾಳ, ವನಹಳ್ಳಿ, ಲಕ್ಕುಂಡಿ, ತಾಳಿಕೊಟಿ, ಸಾಲವಾಡಗಿ, ಬೀಳೆಬಾವಿ, ಸಿಂದಗೇರಿ, ಕೊಂಡಗುಳಿ, ಬೂದಿಹಾಳಡೋಣಿ, ದೇವೂರ ಹೀಗೆ ಮುಂತಾದ ಗ್ರಾಮಗಳು.





ಉತ್ತರ ಕರ್ನಾಟಕದಲ್ಲಿ ತಾಮ್ರ ಶಿಲಾಯುಗ ಸಂಸ್ಕೃತಿಯ ಕಾಲಕ್ಕಾಗಲೇ ಶೈವರಾಧನೆ ಆಚರಣೆಯಲ್ಲಿದ್ದಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಇಲ್ಲಿ ವಿಶ್ಲೇಸಿಸುವ ಅಂಶವೇನೆಂದರೆ ತ್ರಾಮ ಶಿಲಾಯುಗದಲ್ಲಿ ಶೈವರಾಧನೆ ಇರುವದು ತಿಳಿಯುತ್ತದೆ. ನಮ್ಮ ಊರು ಸಹ ತಾಮ್ರ ಶಿಲಾಯುಗದಲ್ಲಿ ಕಂಡು ಬರುವದರಿಂದ ಶ್ರೀ ಗುರು ರೇವಣಸಿದ್ದೇಶ್ವರರು ಈ ವೇಳೆಗೆ ಬಂದು ನೆಲೆಸಿರಬಹುದು ಎಂದು ಕಲ್ಪಸಿಕೊಳ್ಳಬಹುದು.

ಒಟ್ಟಿನಲ್ಲಿ ಹೇಳುವದಾದರೆ **ಮಧ್ಯ ಶಿಲಾಯುಗ, ಅಂತ್ಯ ಹಳೆಶಿಲಾಯುಗ** ಮತ್ತು **ತಾಮ್ರ ಶಿಲಾಯುಗ** ಈ ಮೂರು ಯುಗದಲ್ಲಿ ನಮ್ಮ ಇಂಗಳೇಶ್ವರ ಕೆಲವು ಭಾಗಗಳಲ್ಲಿ ಇತಿಹಾಸಕಾರರಿಗೆ ಹಲವಾರು ಕುರುಹುಗಳು ಸಿಕ್ಕಿವೆ. ಅವು ನೀರಿನ ದಾಹದಿಂದ ಬಳಲುತ್ತಿರುವ ಒಬ್ಬ ಮನುಷ್ಯ ನದಿಯಿಂದ ಒಂದು ತಂಬಿಗೆ (ಚಂಬು) ನೀರು ತಗೆದುಕೊಂಡರೆ ನದಿ ನೀರು ಕಡಿಮೆಯಾಗುವದಿಲ್ಲ. ಹಾಗೇ ನಮ್ಮ ಊರಿನಲ್ಲಿ ಇತಿಹಾಸಕಾರರು ಕೈಗೊಂಡಿದ್ದ ಇತಿಹಾಸದ ಸಂಶೋಧನೆ ನದಿಯಿಂದ ಒಂದು ಚಂಬು ನೀರು ತಗೆದುಕೊಂಡಂತೆ ಎಂದು ಹೇಳಬಹುದು. ಈಗಲೂ ಸಹ ನಾವು ಮನೆಯ ಪಾಯ ಹಾಕುವಾಗ, ಹೊಲದಲ್ಲಿ ಉಳುಮೆ ಮಾಡುವಾಗ ಹಲವಾರು ಕುರುಹುಗಳು ಸಿಗುತ್ತಾ ಇರುತ್ತವೆ. ಇತಿಹಾಸಕಾರರು ಇನ್ನಷ್ಟು ಅಧ್ಯಯನ ಕೈಕೊಂಡರೆ ಬಹಳ ಒಳ್ಳೆಯದು. ಎಂದು ನನ್ನ ಅನಿಸಿಕೆ.

---

**ವಿಜಯಪುರದ ಗೇಜಿಟಿಯರ್ ಸಮಗ್ರ ಭಾರತ ಇತಿಹಾಸ**

೩

# ಇತಿಹಾಸ ಕಾಲದಲ್ಲಿ ಇಂಗಳೇಶ್ವರ

## ಮೌರ್ಯರ ಕಾಲ :

ಭಾರತ ದೇಶದ ಇತಿಹಾಸ ಮೌರ್ಯ ಸಾಮ್ರಾಜ್ಯದಿಂದ ಆರಂಭವಾಗುತ್ತದೆ. ಮೌರ್ಯರು ತಮ್ಮ ಸಾಮ್ರಾಜ್ಯದ ದಕ್ಷಿಣ ಭಾಗವನ್ನು "ಸುವರ್ಣಗಿರಿ" ಎಂದು ಕರೆಯುತ್ತಿದ್ದರು ಉತ್ತರದ ಮೌರ್ಯರಿಗೂ ಹಾಗೂ ದಕ್ಷಿಣದ ಭಾಗದಲ್ಲಿಯ ಕರ್ನಾಟಕಕ್ಕೂ ಅವಿನಾಭಾವದ ಸಂಬಂದ ಇದೆ. ಅಶೋಕನ ಹಲವಾರು ಶಿಲಾಶಾಸನಗಳು ನಮ್ಮ ಸುತ್ತಲಿನ ಜಿಲ್ಲೆಯಲ್ಲಿ ಸಿಕ್ಕಿವೆ. ಆದರೆ ವಿಜಯಪುರ ಜಿಲ್ಲೆಯಲ್ಲಿ ಸಿಕ್ಕಿಲ್ಲ. ಆದರೆ ಸಿಂಗಿರಾಜ ಪುರಾಣದಲ್ಲಿ ಪಟ್ಟದಕಲ್ಲು ಪ್ರದೇಶ ನಂದ ಅರಸರಿಗೆ ಒಳಪಟ್ಟಿತ್ತೆಂದು ದಾಖಲಾಗಿದೆ.ಜೈನರ ಭದ್ರಬಾಹುವಿನಿಂದ ಕರ್ನಾಟಕದಲ್ಲಿ ಜೈನ ಧರ್ಮ ಪರಿಚಯವಾಯಿತು ನಂತರ ಚಂದ್ರಗುಪ್ತನ ಕಾಲದಲ್ಲಿ ಜೈನ ಧರ್ಮ ಕರ್ನಾಟಕದಲ್ಲಿ ಬೆಳೆಯುತ್ತಾ ಬಂದಿದೆ ಎಂಬ ಅಭಿಪ್ರಾಯ ಇದೆ, ಇಂಗಳೇಶ್ವರವು ಜೈನ ಧರ್ಮ ಕೇಂದ್ರವಾಗಿದ್ದರಿಂದ ಇದು ಸಹ ಮೌರ್ಯರ ಆಡಳಿತಕ್ಕೆ ಒಳಪಟ್ಟಿರಬಹುದೆಂದು ಊಹಿಸಬಹುದು.

## ಶಾತವಾಹನರು :

"ಎ ಗೈಡು ಟು ದಿ ಜಿಯಾಗ್ರಪಿ" ಎಂಬ ಗ್ರಂಥದಲ್ಲಿ ಬಾದಾಮಿ, ಪಟ್ಟದಕಲ್ಲು, ಇಂಡಿ, ಕಲಕೇರಿ ಇವುಗಳನ್ನು ದಾಖಲಿಸಲ್ಪಟ್ಟಿವೆ ಇಂಡಿ ಹಾಗೂ ಕಲಕೇರಿ ಗ್ರಾಮ ಇಂಗಳೇಶ್ವರಕ್ಕೆ ಹತ್ತಿರ ಇರುವದರಿಂದ ಇದು ಶಾತವಾಹನರ ಆಡಳಿತದಲ್ಲಿ ಒಳಪಟ್ಟಿರಬಹುದು. ತರ್ಕಿಸಬಹುದಾಗಿದೆ.

## ಕದಂಬರು :

ಪಲ್ಲವರನ್ನು ಸೋಲಿಸಿ ಕರ್ನಾಟಕದಲ್ಲಿ ಮೊದಲ ರಾಜಮನೆತನ ಸ್ಥಾಪಿಸಿದವರು ಕದಂಬರು. ಇವರು ಬನವಾಸಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದರು. ಮೃಗೇಶವರ್ಮನ ಕಾಲದಲ್ಲಿ ಬೆಳಗಾವಿ ಜಿಲ್ಲೆಯ ಹಲಸಗಿಯಲ್ಲಿ ಇರುವದು ಕಂಡುಬರುತ್ತದೆ ನಮ್ಮ ಪಕ್ಕದ ಬಾಗಲಕೋಟೆ ಜಿಲ್ಲೆಯ ಬಾದಾಮಿ ಅಕ್ಕ ಪಕ್ಕದಲ್ಲಿ ಹಲವಾರು ಕುರುಹುಗಳು ಸಿಕ್ಕಿವೆ. ಆದರೆ





ನಮ್ಮ ವಿಜಯಪುರ ಭಾಗದಲ್ಲಿ (ಇಂಗಳೇಶ್ವರ) ಇವರ ಆಡಳಿತಕ್ಕೆ ಸಂಬಂಧಿಸಿದ ಯಾವುದೆ ತರಹದ ಕುರುಹುಗಳು ನಮ್ಮ ಭಾಗದಲ್ಲಿ ಕಾಣಸಿಗುವದಿಲ್ಲ.

## ಬಾದಾಮಿ ಚಾಲುಕ್ಯರು (ಕಿ.ಶ.೫೪೭) :

ಕವಿ ಬಿಲ್ಹಣನ ಪ್ರಕಾರ "ಬ್ರಹ್ಮನು ತನ್ನ ಎರಡು ಕೈಯನ್ನು ಬೊಗಸೆಯ ರೂಪದಲ್ಲಿ ಜೋಡಿಸಿರುವುದು, ಅಂದರೆ ಚುಳುಕ ಎಂಬ ಅರ್ಥವನ್ನು ಕಲ್ಪಿಸಿ ಇವರು ಬ್ರಹ್ಮನ ಚುಳಕದಿಂದ ಬಂದವರಾದುದರಿಂದ ಇವರಿಗೆ ಚಳುಕ್ಯ, ಚಾಲುಕ್ಯರು ಎಂಬ ಹೆಸರು ಬಂದಿತೆಂದಿದ್ದಾನೆ.

ಒಂದನೆಯ ಪುಲಿಕೇಶಿಯಿಂದ ಬಾದಾಮಿ ಚಾಲುಕ್ಯರು ವಂಶಾಡಳಿತ ಪ್ರಾರಭವಾಗುವದು. ಚಾಲುಕ್ಯ ಅರಸರಲ್ಲಿಯೇ ಸುಪ್ರಸಿದ್ಧನಾದವನೆಂದರೆ ಎರಡನೇಯ ಪುಲಿಕೇಶಿ. ಉತ್ತರ ಭಾರತದ ಉತ್ತರಪಥೇಶ್ವರನೆಂದು ಕರೆಸಿಕೊಂಡ ಹರ್ಷವರ್ಧನನ್ನು ೬೩೦-೬೩೪ ರಲ್ಲಿ ನರ್ಮದಾ ನದಿಯ ದಡದಲ್ಲಿ ಸೋಲಿಸಿ ಪರಮೇಶ್ವರ ಎಂಬ ಬಿರುದನ್ನು ಧರಿಸಿ. ಈ ವಿಜಯದಿಂದ ೯೯೦೦೦ ಹಳ್ಳಿಗಳನ್ನೊಳಗೊಂಡ ಮೂರು ಮಹಾರಾಷ್ಟ್ರಗಳ ಅಧಿಪತಿಯೆಂದು ಕರೆಸಿಕೊಂಡನು.

ಮೇಲ್ಕಾಣಿಸಿದ ಅಂಶವನ್ನು ಗಮನಿಸಿದಾಗ ನಮ್ಮ ಎಲ್ಲಾ ಭಾಗವು (ಇಂಗಳೇಶ್ವರ) ಬಾದಾಮಿಯ ಚಾಲುಕ್ಯರ ಆಡಳಿತಕ್ಕೆ ಒಳಪಟ್ಟಿರಬಹುದು ಎಂದು ಊಹಿಸಬಹುದು ಆದರೆ ಇದಕ್ಕೆ ಸಂಬಂಧಪಟ್ಟ ಯಾವುದೆ ಶಾಸನಗಳು ನಮ್ಮ ಈ ಭಾಗದಲ್ಲಿ ಇಲ್ಲ.

## ರಾಷ್ಟ್ರಕೂಟರು :

ರಾಷ್ಟ್ರಕೂಟರು ಬಾದಾಮಿಯ ಚಾಲುಕ್ಯರ ಸಾಮಂತ ಅರಸರು. ಚಾಲುಕ್ಯರ ದೊರೆ ಇಮ್ಮಡಿ ವಿಕ್ರಮಾದಿತ್ಯನ ಕಾಲದಲ್ಲಿ ದಂತಿದುರ್ಗ ಪ್ರಬಲನಾಗಿ ಬೆಳೆದ ವಿಕ್ರಮಾದಿತ್ಯನ ಮರಣದ ಕ್ರಿ.ಶ ೭೫೬ರಲ್ಲಿ ಚಾಲುಕ್ಯರ ಎರಡನೆಯ ಕೀರ್ತಿವರ್ಮನನ್ನು ಸೋಲಿಸಿ ದಂತಿದುರ್ಗ ರಾಷ್ಟ್ರಕೂಟರ ಮನೆತನ ಸ್ಥಾಪಿಸಿದ. ಇವನಿಗೆ ಮಕ್ಕಳು ಇಲ್ಲದ ಕಾರಣ ಚಿಕ್ಕಪ್ಪನಾದ ಕೃಷ್ಣ ಆಡಳಿತ ಮಾಡಹತ್ತಿದ. ಇವನ ನಂತರ ಬಂದ ಮೂರನೇಯ ಗೋವಿಂದನ ಕಾಲದಲ್ಲಿ ರಾಷ್ಟ್ರಕೂಟರ ಮನೆತನ ಕನ್ಯಾಕುಮಾರಿಯಿಂದ ಹಿಮಾಲಯದವರೆಗೂ ಸೌರಾಷ್ಟ್ರದಿಂದ ಬಂಗಾಳದವರಿಗೂ ವಿಸ್ತರಿಸಿತು.ಅಮೋಘವರ್ಷನ ಕಾಲದಲ್ಲಿ ಭೇಟಿ ನೀಡಿದ ಸುಲೇಮಾನ್ ಚೀನಾ ಪರ್ಷಿಯಾ ಹಾಗೂ ರೋಮ್ ಸಾಮ್ರಾಜ್ಯಕ್ಕಿಂತ

ದೊಡ್ಡದಾಗಿತ್ತು ಎಂದು ಉಲ್ಲೇಖಿಸಿದ್ದಾನೆ. ಇಂತಹ ಸಾಮ್ರಾಜ್ಯದಲ್ಲಿ ಮತ್ತೆ ಪ್ರಮುಖವಾದವನೆಂದರೆ ಮೂರನೇಯ ಕೃಷ್ಣ. ಇವನ ಆಳ್ವಿಕೆಯಲ್ಲಿ ೧೦೦೦ ಪ್ರಾಂತ್ಯ ಕೂಡಿದ ತರ್ದವಾಡಿಯಾಗಿ ರೂಪಗೊಂಡಿತ್ತು.

ರಾಷ್ಟ್ರಕೂಟರಿಗೆ ಸಂಬಂಧಿಸಿದ ಸುಮಾರು ೨೫ ಶಾಸನಗಳು ನಮ್ಮ ಜಿಲ್ಲೆಯಲ್ಲಿಯೇ ವರದಿಯಾಗಿವೆ. ನಮ್ಮ ಪಕ್ಕದ ತಾಲೂಕಾದ ಸಿಂದಗಿಯ ಯರಗಲ್ಲಿನಲ್ಲಿ ಸುಮಾರು ೭೭೭ ರಲ್ಲಿ ರಾಷ್ಟ್ರಕೂಟರಿಗೆ ಸಂಬಂಧಿಸಿದ ವೀರಗಲ್ಲು ಸಿಕ್ಕಿದೆ.ಇನ್ನೂ ಹೂವಿನಹಿಪ್ಪರಗಿಯಲ್ಲಿ ವರದಿಯಾಗಿರುವ ೮೬೭ರ ಶಾಸನ ಜ್ಯೋತಿಷಿ ಗೋಲೆಯಭಟನಿಗೆ ಹಿಪ್ಪರಗಿ ಗ್ರಾಮವನ್ನು ದಾನ ನೀಡಿದ ಬಗ್ಗೆ ಉಲ್ಲೇಖವಿದೆ. ಹಾಗೇ ೯೪೫ ರಲ್ಲಿ ಇಂಡಿ ತಾಲೂಕಿನ ಸಾಲೋಟಗಿಯಲ್ಲಿ ರಾಷ್ಟ್ರಕೂಟರ ಮೂರನೆಯ ಕೃಷ್ಣನ ದಂಡನಾಯಕ ಚಕ್ರಾಯುಧನು ವಿದ್ಯಾರ್ಥಿನಿಲಯಕ್ಕೆ ಭೂದಾನ ನೀಡಿದನೆಂದು ತಿಳಿಯುತ್ತದೆ. ಹಾಗೇ ಬಾಗೇವಾಡಿ ತಾಲೂಕಿನ ನರಸಲಗಿಯ ೯೬೫ ಶಾಸನ ಮೂರನೆ ಕೃಷ್ಣನ ಸಾಮಂತ ಅರಸ **ತೈಲಪರಸ ತರ್ದೆವಾಡಿ ೧೦೦೦ ನಾಡನ್ನು ಆಳುತ್ತಿದ್ದಾಗ** ನರಸಲಗಿಯ ದೇವಾಲಯಕ್ಕೆ ಹಲವಾರು ತೆರಿಗೆ ದಾನ ಬಿಟ್ಟ ಅಂಶಗಳು ದಾಖಲಾಗಿವೆ.

ಇಲ್ಲಿ ವಿಶ್ಲೇಷಿಸಿದಾಗ ತರ್ದವಾಡಿಯ ೧೦೦೦ ಪ್ರಾಂತ್ಯದಲ್ಲಿ ನಮ್ಮ ಇಂಗಳೇಶ್ವರವು ಇದ್ದುದರಿಂದ ನಮ್ಮ ಊರನ್ನು ಆಳಿದ ಮೊದಲ ರಾಜ ಮನೆತನವೆಂದರೆ ಅದು ರಾಷ್ಟ್ರಕೂಟರು

## ಕಲ್ಯಾಣದ ಚಾಲುಕ್ಯರು :

ರಾಷ್ಟ್ರಕೂಟರ ಸಾಮಂತ ಅರಸರಾಗಿ ಬಂದವರು ಕಲ್ಯಾಣದ ಚಾಲುಕ್ಯರು, ರಾಷ್ಟ್ರಕೂಟರ ದೊರೆ ೩ನೇ ಕೃಷ್ಣನ ಕಾಲದಲ್ಲಿ ಸಮರ್ಥವಾಗಿ ಆಡಳಿತ ನಡೆಸಿದ ಕಾರಣ ಎರಡನೇಯ ತೈಲಪನಿಗೆ ತರ್ದವಾಡಿಯ ೧೦೦೦ ಪ್ರಾಂತ್ಯ ಜಹಗೀರಾಗಿ ಬಂತು. ೩ನೇ ಕೃಷ್ಣನ ಮರಣದ ನಂತರ ಎರಡನೇಯ ತೈಲಪ ರಾಷ್ಟ್ರಕೂಟರ ಅಸಮರ್ಥ ದೊರೆ ಕರ್ಕನನ್ನು ಸುಮಾರು ೯೭೩ ರಲ್ಲಿ ಸೋಲಿಸಿ ಮಾನ್ಯಖೇಡದಲ್ಲಿ ಚಾಲುಕ್ಯ ಮನೆತನ ಸ್ಥಾಪನೆ ಮಾಡಿದ. ಮುಂದೆ ಒಂದನೇಯ ಸೋಮೇಶ್ವರನ ಕಾಲದಲ್ಲಿ ಮಾನ್ಯಖೇಡದಿಂದ ರಾಜದಾನಿಯು ಕಲ್ಯಾಣಕ್ಕೆ ವರ್ಗಾವಣೆಗೊಂಡಿತು. ಇವರ ಕಾಲದಲ್ಲಿಯೇ ಇಂಗಳೇಶ್ವರದ ಕೀರ್ತಿ ಅಜರಾಮರವಾಯಿತು.





## ಇಮ್ಮಡಿ (೨ನೇ) ತೈಲಪ :

ಇವನ ಬಗ್ಗೆ ಹಳ್ಳೂರು ಕಾಖಂಡಕಿ, ಕಾರಜೋಳ ಮತ್ತು ನರಸಲಗಿ ಹಾಗೂ ಮುಂತಾದ ಕಡೆ.ಸುಮಾರು ೨೦೦ ಶಾಸನಗಳು ನಮ್ಮ ಜಿಲ್ಲೆಯಲ್ಲಿ ಸಿಕ್ಕಿವೆ ಹಲವಾರು ಸಾಹಿತ್ಯ ಕೃತಿಗಳು ಇವರ ಕಾಲದಲ್ಲಿ ರೂಪಗೊಂಡವು. ಈತ ಚೋಳ, ಪರಮಾರ, ಗೂರ್ಜರ,ಗಂಗರ ಮೇಲೆ ಯುದ್ಧಮಾಡಿ ಗೆದ್ದ. ಇವನಿಗೆ ಇಬ್ಬರು ಮಕ್ಕಳು. ಸತ್ಯಾಶ್ರಯ ಮತ್ತು ದಶವರ್ಮ ಇದ್ದರು. ಇಮ್ಮಡಿ ತೈಲಪ ಮರಣದ ನಂತರ ಅವನ ಮೊದಲ ಮಗ ಇರಿವಬೆಡಂಗ ಸತ್ಯಾಶ್ರಯ ಅಧಿಕಾರಕ್ಕೆ ಬಂದ.

## ಸತ್ಯಾಶ್ರಯ :

ಇವನು ಸಹ ತಂದೆಯಂತೆ ಚೋಳರೊಡನೆ ಯುದ್ಧಮಾಡಿದ ಆದರೆ ಯುದ್ಧದಲ್ಲಿ ಜಯ ಸಿಗದೇ ಯುದ್ದದಲ್ಲಿ ತನ್ನ ತಮ್ಮನಾದ ದಶವರ್ಮನನ್ನು ಸಹ ಕಳೆದುಕೊಂಡ. ಆದರೆ ಚಲ ಬಿಡದೆ ಶಿಲಾಹಾರ ಅಪರಾಜಿತ ಹಾಗೂ ಲಾಟದ ಮೂಲರಾಜರನ್ನು ಸಹ ಯುದ್ಧಮಾಡಿ ಗೆಲವು ಸಾಧಿಸಿದನು. ಈತನೂ ಸಹ ಹಲವಾರು ದಾನ ದತ್ತಿ ನೀಡಿದ್ದಾನೆ ಇವನ ಆಶ್ರಯದಲ್ಲಿ ಪ್ರಸಿದ್ಧ ಕವಿಯಾದ **ರನ್ನ** ಇದ್ದನು ಇಲ್ಲಿ ಅವನು ಗದಾಯುದ್ಧ ಸಾಹಸ ಭೀಮ ವಿಜಯ ತನ್ನ ಆಶ್ರಯಧಾತ ಸಾಧನೆಗಳನ್ನು ಇದರಲ್ಲಿ ಅನ್ವಯಿಸಿ ಹೇಳಿದ್ದಾನೆ. ಇವನಿಗೆ ಒಬ್ಬಳೇ ಹೆಣ್ಣು ಮಗಳು ಇವಳನ್ನು ಪಲ್ಲವ ಮನೆತನದ ನೊಳಂಬನಿಗೆ ಕೊಟ್ಟು ಮದುವೆ ಮಾಡಿದ ಗಂಡು ಮಕ್ಕಳಿಲ್ಲದ ಕಾರಣ ತಮ್ಮ ದಶವರ್ಮನ ಹಿರಿಯ ಮಗ ಐದನೆಯ ವಿಕ್ರಮಾದಿತ್ಯನನ್ನು ಚಾಲುಕ್ಯ ಸಿಂಹಾಸನಕ್ಕೆ ಪಟ್ಟಕಟ್ಟಿದ.

## ಚೋಳ ಮನೆತನ :

ಕಲ್ಯಾಣದ ಚಾಲುಕ್ಯರ ಮನೆತನದ ಆಳ್ವಿಕೆಯ ನಡುವೆ ಕ್ರಿ.ಶ. ೧೦೦೭– ೧೦೦೮ ರಲ್ಲಿ ರಚಿತಗೊಂಡ ಹೊಟ್ಟೂರಿನ ಶಾಸನದ ಪ್ರಕಾರ ಜೋಳರು ಡೋಣೂರುವರೆಗೆ ನುಗ್ಗಿ ಬಂದ ರಾಜೇಂದ್ರಚೋಳನು ತನ್ನ ೯ ಲಕ್ಷ ಸೈನ್ಯದೊಂದಿಗೆ ಸತ್ಯಾಶ್ರಯನ ಸಾಮ್ರಾಜ್ಯವನ್ನೆಲ್ಲಾ ದೋಚಿಕೊಂಡು ಸ್ತ್ರೀವಧೆ, ಬಾಲವಧೆ, ಬ್ರಾಹ್ಮಣವಧೆಗಳನ್ನು ಮಾಡಿ ಹೆಂಗಸರನ್ನು ಹಿಡಿದು ಅವರನ್ನು ಅವಮಾನಿಸಿದ ಇಂತಹ ರಾಜೇಂದ್ರಜೋಳನನ್ನು ಸತ್ಯಾಶ್ರಯನು ಹೊಡೆದೋಡಿಸಿ ಅವನಿಂದ ಅಸ್ತು ವಾಹನಗಳನ್ನು ವಶಪಡಿಸಿಕೊಂಡನೆಂದೂ ಆ ಶಾಸನ ತಿಳಿಸುತ್ತದೆ.

ಇಲ್ಲಿ ಗಮನಿಸುವ ಅಂಶವೇನೆಂದರೆ ರಾಜೇಂದ್ರ ಚೋಳನು ನಮ್ಮ ಪಕ್ಕದ ಡೋಣೂರಿಗೆ ಬಂದ ಶಾಸನ ಇದ್ದುದರಿಂದ ನಮ್ಮ ಇಂಗಳೇಶ್ವರವು ಆ ಕಾಲದಲ್ಲಿ ಪ್ರಮುಖ ಅಗ್ರಹಾರವಾಗಿದ್ದರಿಂದ ನಮ್ಮ ಊರು ಸಹ ಚೋಳರ ಕಾಲದಲ್ಲಿ ಅಲ್ಪ ದಿನ ಇದ್ದಿರಬಹುದೆಂದು ಎಂದು ತರ್ಕಿಸಬಹುದು. (ಪರಮಾನಂದನ ಕೆರೆಯ ಬಳಿ ಇರುವ ದೇವಾಲಯದ ಬಳಿ ಹುಲಿ ಚಿತ್ರದ ಕಲ್ಲು ಇದ್ದುದರಿಂದ ಈ ದೇವಾಲಯವನ್ನು ಅವರು ಕಟ್ಟಿಸಿರಬಹುದೆಂದು ತರ್ಕಮಾಡಬಹುದಷ್ಟೇ.)

## ೫ನೇ ವಿಕ್ರಮಾದಿತ್ಯ ೧೦೦೦-೧೦೦೯ :

ಇವನ ಆಳ್ವಿಕೆ ಕಡಿಮೆ ಈತನ ನಂತರ ಚೋಳರು ಪರಮಾರರು ಈತನ ಮೇಲೆ ದಾಳಿ ಮಾಡಿದರು.

## ಅಯ್ಯಣ :

ಈತನ ಆಳ್ವಿಕೆಯು ಕಡಮೆ ಆದರೆ ಇವನ ಆಳ್ವಿಕೆಯ ಕಾಲದಲ್ಲಿ ಇಂಡಿ ತಾಲೂಕಿನ ರೂವಿಗೆಯಲ್ಲಿ ಶಾಸನವಂದು ಸಿಕ್ಕಿದೆ ಇದು ಚಾಲುಕ್ಯರ ವಂಶಾವಳಿಯನ್ನು ತಿಳಿಸುತ್ತದೆ ೧೦೧೫ ರಲ್ಲಿ ಅಯ್ಯಣನೆ ಇದನ್ನು ಹೊರಡಿಸಿದ್ದ. ಈತನ ನಂತರ ಇವನ ಸಹೋದರ ಇಮ್ಮಡಿ ಜಯಸಿಂಹ ಅಧಿಕಾರಕ್ಕೆ ಬಂದ

## ಇಮ್ಮಡಿ ಜಯಸಿಂಹ ೧೦೧೬ :

ಇಮ್ಮಡಿ ಅಯ್ಯಣ ನಂತರ ಇಮ್ಮಡಿ ಜಯಸಿಂಹ ಅಧಿಕಾರಕ್ಕೆ ಬಂದ. ನಂತರ ಧಾರಾ ರಾಜ್ಯದ ಭೋಜರಾಜನ ಸಂಪತ್ತನ್ನೆಲ್ಲಾ ದೋಚಿದ ಇದರಿಂದ ಸಿಟ್ಟಿಗೆದ್ದ ಭೋಜರಾಜ ಕಲಚೂರಿ ಗಂಗೇಯದೇವ ರಾಜೇಂದ್ರ ಚೋಳನ ಕೂಡಿಕೊಂಡು ಗೋದಾವರಿ ತೀರದಲ್ಲಿ ಯುದ್ಧ ಮಾಡಿ ಗೆದ್ದನು ಆದರೆ ಜಯಸಿಂಹನು ಚೇತರಿಸಿಕೊಂಡು ಭೋಜನನ್ನು ಸೋಲಿಸಿ ಕೊಂಕಣ ಪ್ರದೇಶವನ್ನು ವಶಪಡಿಸಿಕೊಂಡು ವೈರಿಗಳ ಸಂಪತ್ತನ್ನೆಲ್ಲಾ ಸೂರೆಮಾಡಿದ. ಈತನ ರಾಣಿ ಸುಗ್ಗಲಾದೇವಿಯಿಂದ ಈತ ಲಿಂಗಾಯತ ಪಂತಕ್ಕೆ ಮತಾಂತರಗೊಂಡ ಇವನ ಇತಿಹಾಸ ಸಾರುವ ೨೦ ಕ್ಕೂ ಹೆಚ್ಚು ಶಾಸನಗಳು ನಮ್ಮ ಜಿಲ್ಲೆಯಲ್ಲಿ ಸಿಕ್ಕಿವೆ. ಇಂಡಿಯ ರೂವಿಗಿಯಲ್ಲಿಯ ಶಾಸನ ಜಯಸಿಂಹನು ಏತಗಿರಿಯಲ್ಲಿ (ಯಾದಗಿರಿ) ರಾಜ್ಯವಾಳುತ್ತಿದ್ದಾಗ ಇವನ ಮಗ **ದಾಸರಸ ತರ್ದವಾಡಿನಲ್ಲಿಯ ೧೮ ಅಗ್ರಹಾರವನ್ನು ಆಳುತ್ತಿದ್ದ** ಎಂದು ತಿಳಿಯುತ್ತದೆ ಈತ





ಹಲವಾರು ದಾನ -ದತ್ತಿ ನೀಡಿದ್ದಾನೆ **ಇವನ ಶಾಸನವು ಬಿಜಾಪುರದ ಬದಲಿಗೆ ವಿಜಯಪುರ ಎಂದು ಉಲ್ಲೇಖಿಸಿದ್ದಾನೆ.**

## ಒಂದನೇಯ ಸೋಮೇಶ್ವರ :

ಇಮ್ಮಡಿ ಜಯಸಿಂಹನ ನಂತರ ಒಂದನೇಯ ಸೋಮೇಶ್ವರನು ಅಧಿಕಾರಕ್ಕೆ ಬಂದ. ಮೊದಲಿಗೆ ಇವನು ರಾಜಧಾನಿಯಾದ ಮಾನ್ಯಖೇಡವನ್ನು ಕಲ್ಯಾಣಕ್ಕೆ ವರ್ಗಾಯಿಸಿ ಕಲ್ಯಾಣವನ್ನು ಕಟ್ಟಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಇವನು ಚೋಳ ಹಾಗೂ ಹಲವಾರು ರಾಜರೊಡನೆ ಯುದ್ಧ ಮಾಡಿದ ಇವನ ಆಳ್ವಿಕೆಗೆ ಸಂಬಂದಿಸಿದಂತೆ ೨೦ ಶಾಸನಗಳು ನಮ್ಮ ಜಿಲ್ಲೆಯಲ್ಲಿ ವರದಿಯಾಗಿವೆ ಬಾಗೇವಾಡಿಯ ಸಾರಂಗ ಮಠದಲ್ಲಿರುವ ಶಾಸನ ತ್ರೈಲೋಕ್ಯಮಲ್ಲನು ಪಲ್ಲವರನ್ನು ಸೋಲಿಸಿ ವಗ್ಗಾಪುರದಲ್ಲಿ ತಂಗಿದ್ದು ತಿಳಿಯುತ್ತದೆ ಇಲ್ಲಿ ಇವನ ಎಂಟು ರಾಣಿಯರಲ್ಲಿ ಹಿರಿಯ ರಾಣಿ **ಮೈಳಲದೇವಿಯು ಸೂರ್ಯಗ್ರಹಣ ನಿಮಿತ್ತ ಲಕ್ಷ ಹೋಮ ಮಾಡಿಸಿದ** ಸಂದರ್ಭದಕ್ಕು ತರ್ದವಾಡಿಯ ೧೦೦೦ ದೊಳಗಿದ್ದ ಮುಂಬಾಡದ ಬಳಿಯ ಭತ್ತಗ್ರಾಮ ಹೊಂನವಾಡಿಯ ಸೋಮೇಶ್ವರ ದೇವಾಲಯದ ಪೂಜಾವಿಧಿಗೆಂದು ವಿವಿಧ ವರ್ತಕರು ದಾನ ನೀಡಿದ ಅಂಶವನ್ನು ತಿಳಿಸುತ್ತದೆ. ದೇವೂರಿನ ರಾಮೇಶ್ವರ ಗುಡಿ ಛಾವಣಿಯಲ್ಲಿರುವ **೧೦೬೪ ರ ಶಾಸನ ನೊಳಂಬ ಪಲ್ಲವ ಪೆರ್ಮಾನಡಿ ಜಯಸಿಂಗದೇವರು ತರ್ದವಾಡಿ ನಾಡನ್ನು ಆಳುತ್ತಿದ್ದಾಗ** ಮಹಾಸಾಮಂತ ವಾನರಸನು ಮಾರಸಿಂಗೇಶ್ವರ ದೇವರ ಸೇವೆಗೆಂದು ಭೂದಾನ ನೀಡಿದ್ದು ತಿಳಿಸುತ್ತದೆ.ಅದರಂತೆ ಹುನಗುಂದ, ಪುರುಗೂರು, ಕುಂದುರಗೆಗಳಲ್ಲಿ ಜೈನ ಬಸದಿಗಳನ್ನು ನಿರ್ಮಿಸಿದನು. ಇವನಿಗೆ ೩ ಜನ ಮಕ್ಕಳು ಇಮ್ಮಡಿ ಸೋಮೇಶ್ವರ, ಆರನೆಯ ವಿಕ್ರಮಾದಿತ್ಯ ಹಾಗೂ ಜಯಸಿಂಹ ಇದರಲ್ಲಿ ಹಿರಿಯ ಮಗ ಇಮ್ಮಡಿ ಸೋಮೇಶ್ವರ ಅಧಿಕಾರಕ್ಕೆ ಬಂದ.

## ಎರಡನೆ (೨ನೇ) ಸೋಮೇಶ್ವರ ೧೦೬೮-೧೦೭೬ :

ಮೊದಲನೇಯ ಸೋಮೇಶ್ವರನ ನಂತರ ಎರಡನೇಯ ಸೋಮೇಶ್ವರ ಅಧಿಕಾರಕ್ಕೆ ಬಂದ. ಆಗ ವೀರರಾಜೇಂದ್ರ ಚೋಳ ದಂಡೆತ್ತಿ ಬಂದ ಆಗ ಇವನ ತಮ್ಮಂದಿರಾದ ವಿಕ್ರಮಾದಿತ್ಯನು ಜಯಸಿಂಹನೊಂದಿಗೆ ಕೂಡಿಕೊಂಡು ವೀರರಾಜೇಂದ್ರ ಚೋಳನನ್ನು ಸೋಲಿಸಿ ನಂತರದಲ್ಲಿಯೇ ವೀರರಾಜೇಂದ್ರ ಚೋಳ ವಿಕ್ರಮಾದಿತ್ಯನಿ ಮಗಳನ್ನು ಕೊಟ್ಟು ಮದುವೆಮಾಡಿದ ನಂತರದಲ್ಲಿ ವೀರರಾಜೇಂದ್ರ ಮರಣ ಹೊಂದಿದ ಇವನ ಆಸ್ಥಾನದಲ್ಲಿ ಅಳಿಯರಾದ

ಅಧಿರಾಜೇಂದ್ರನು ಆಡಳಿತ ಪ್ರಾರಂಬಿಸಿದರು ಮುಂದೆ ಇವನ ಮರಣ ನಂತರದಲ್ಲಿ ಸಿಂಹಾಸನಕ್ಕಾಗಿ ಅಣ್ಣ ತಮ್ಮಂದಿರಲ್ಲಿ ವೈಮನಸ್ಸು ಉಂಟಾಗಿ ವಿಕ್ರಮಾದಿತ್ಯನು ಸೋಮೇಶ್ವರನನ್ನು ಬಂಧಿಸಿ ೧೦೭೬ ರಲ್ಲಿ ಅಧಿಕಾರಕ್ಕೆ ಬಂದ.

ಎರಡನೇಯ ಸೋಮೇಶ್ವರನ ಆಡಳಿತಕ್ಕೆ ಸಂಬಂಧಿಸಿದಂತೆ ನಮ್ಮ ಜಿಲ್ಲೆಯಲ್ಲಿ ಸುಮಾರು ೧೦ ಶಾಸನಗಳು ಸಿಕ್ಕಿವೆ.ಇವನ ಕಾಲದ ಇಂಡಿಯ ತಾಲೂಕಿನ ರೂವಿಗಿ ಶಾಸನ ೧೦೬೮ **ಮಹಾಮಂಡಳೇಶ್ವರ ಪಾಯ್ಯರಸನು ತರ್ದವಾಡಿ ೧೦೦೦ ವನ್ನು ಆಳುತ್ತಿದ್ದಾಗ** ಮಾಧವಯ್ಯ ನಾಯಕನು ಅರಸರಲ್ಲಿ ವಿನಂತಿಸಿಕೊಂಡು ಅಗ್ರಹಾರ ರೂವಿಗೆಯ ನಗರೇಶ್ವರ ದೇವರಿಗೆ ಭೂದಾನ ನೀಡಿದ ಅಂಶವನ್ನು ತಿಳಿಸುತ್ತದೆ.

ಮುಂದೆ ೧೦೭೪ ರಲ್ಲಿ ವಿಜಯಪುರದ ವಸ್ತು ಸಂಗ್ರಹಾಲಯದಲ್ಲಿರುವ **೧೦೭೪ ರ ಶಾಸನ ನಾಕಿಮಯ್ಯನು ತರ್ದವಾಡಿ ನಾಡನ್ನು ಆಳುತ್ತಿದ್ದಾಗ ಬಲ್ಲವರಸನಿಗೆ** ವಿಜಯಪುರದಲ್ಲಿ ಸ್ವಯಂಭು ಸಿದ್ದೇಶ್ವರ ದೇವಾಲಯ ನಿರ್ಮಿಸಿವಂತೆ ಆದೇಶ ಹಾಗೂ ಪೂಜಾವಿಧಿಗೆಂದು ಭೂದಾನ ನೀಡಿದ ಅಂಶವನ್ನು ದಾಖಲಿಸುತ್ತದೆ.

## ೬ನೇ ವಿಕ್ರಮಾದಿತ್ಯ ೧೦೭೬–೧೧೨೬ :

ಈತ ಎಡನೇಯ ಸೋಮೇಶ್ವರನನ್ನು ಬಂಧಿಸಿ ೧೦೭೬ ರಲ್ಲಿ ಅಧಿಕಾರಕ್ಕೆ ಬಂದ. ಮೊದಲಿದ್ದ ಶಕವರ್ಷ ಬದಿಗಿಟ್ಟು "ಚಾಲುಕ್ಯ ವಿಕ್ರಮಶಕೆ" ಎಂಬ ಹೊಸ ಶಕೆಯನ್ನು ಪ್ರಾರಂಭಿಸಿ ಹಲವಾರು ಯುದ್ಧಗಳನ್ನು ಮಾಡಿ ಗೂರ್ಜರ ಕಲಚೂರಿ ಯಶಃಕರ್ಣ ಹಲವರನ್ನು ಸೋಲಿಸಿ ಸುಮಾರು ೫೦ ವರ್ಷಗಳ ಕಾಲ ಅಧಿಕಾರವನ್ನು ನಡೆಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಇವನ ಕಾಲದಲ್ಲಿ ಕಲ್ಯಾಣ ಚಾಲುಕ್ಯರ ಮನೆತನ ಸರ್ವಾಂಗೀಣ ಪ್ರಗತಿ ಕಂಡಿತು. ಸಾವಿರಾರು ಶಾಸನಗಳ ಸರದಾರ' ಎಂದು ಕರೆಸಿಕೊಂಡ ೬ ನೇ ವಿಕ್ರಮಾದಿತ್ಯ ಕಲ್ಯಾಣ ಚಾಲುಕ್ಯರಲ್ಲಿಯೇ ಬಹು ಪರಾಕ್ರಮಿ ಈತನ ೬೦ ಶಾಸನಗಳು ನಮ್ಮ ಭಾಗದಲ್ಲಿ ಸಿಕ್ಕಿವೆ. ಈತನು ಸಹ ಹಲವಾರು ದಾನ ದತ್ತಿಗಳನ್ನು ನೀಡಿದ್ದಾನೆ. ಹಲವಾರು ಬಿರುದು ಹೊಂದಿದ ಇವನ ಆಸ್ಥಾನದಲ್ಲಿ ಕವಿಪುಂಗವರಿದ್ದರು ಬಿಲ್ಹಣನ "ವಿಕ್ರಮಾಂಕ ಚರಿತೆ" ವಿಜ್ಞಾನೇಶ್ವರರ "ಮಿತಾಕ್ಷರ" ಧರ್ಮಗ್ರಂಥ ರಚನೆಯಾದದು ಇವನ ಕಾಲದಲ್ಲಿಯೇ. ಇವನಿಗೆ ೨೫ ಕ್ಕಿಂತ ಹೆಚ್ಚು ಜನ ಹೆಂಡರು (ರಾಣಿ) ಇದ್ದರು ಕೇತಲದೇವಿ, ಮಲೆಯ ಮತೀದೇವಿ, ಸಾವಳದೇವಿ, ಶಿಲಾಹಾರ ಚಂದ್ರಲೇಖ ಮುಂತಾದವರು ಇದ್ದರು. ವಿಕ್ರಮಾದಿತ್ಯನು ೧೧೨೭





ರಲ್ಲಿ ಮರಣ ಹೊಂದಿದ ನಂತರ ರಾಣಿ ಚಂದ್ರಲೇಖನ ಮಗ ಮೂರನೇಯ (ಮುಮ್ಮಡಿ) ಸೋಮೇಶ್ವರ ಅಧಿಕಾರಕ್ಕೆ ಬಂದ

## ಮುಮ್ಮಡಿ ೩ನೇ ಸೋಮೇಶ್ವರ :

ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಪ್ರಗತಿಯನ್ನು ಕಂಡಿದ್ದ ಕಲ್ಯಾಣ ಚಾಲುಕ್ಯ ಮನೆತನದಲ್ಲಿ ಮೂರನೇಯ ಸೋಮೇಶ್ವರ ಅಧಿಕಾರಕ್ಕೆ ಬಂದ. ಈತನು ಘನ ಪಂಡಿತನಾಗಿದ್ದರಿಂದ ಸಾಹಿತ್ಯಕ್ಕೆ ಒಲವು ಜಾಸ್ತಿ ಇತ್ತು ರಾಜಕೀಯದ ಬಗ್ಗೆ ಬಹಳ ಆಸಕ್ತಿ ತೋರಲಿಲ್ಲ. ಇವನು "ಅಭಿಲಾಷಿತರ್ಥ ಚಿಂತಾಮಣಿ" ಅಥವಾ "ಮಾನಸೋಲ್ಲಾಸ" ಎಂಬ ಗ್ರಂಥಗಳನ್ನು ಬರೆದಿದ್ದಾನೆ ಈ ಗ್ರಂಥದಲ್ಲಿ ನ್ಯಾಯಪದ್ದತಿ ವೈದ್ಯಶಾಸ್ತ್ರ, ರಸಾಯನಶಾಸ್ತ್ರ, ಶಸ್ತ್ರವಿದ್ಯೆ, ಅಶ್ವಶಾಸ್ತ್ರ, ವಾಸ್ತು ವಿದ್ಯೆ, ರತ್ನ ಪರಿಕ್ಷೆ ಮುಂತಾದ ಸರ್ವ ಶಾಸ್ತ್ರಗಳು ಅಡಗಿದ್ದರಿಂದ ಇದು ವಿಶ್ವಕೋಶದಂತೆ ಕಾಣುತ್ತಿತ್ತು ಆದ್ದರಿಂದ ಇವನು "ಸರ್ವಜ್ಞ ಚಕ್ರವರ್ತಿ" ಎಂದು ಪ್ರಸಿದ್ಧನಾಗಿದ್ದ

ಇವನ ೧೦ ಕ್ಕೂ ಹೆಚ್ಚು ಶಾಸನಗಳು ನಮ್ಮ ಜಿಲ್ಲೆಯಲ್ಲಿಯೇ ಸಿಕ್ಕಿವೆ. ಅದರಲ್ಲಿ ನಮ್ಮ **ಇಂಗಳೇಶ್ವರದಲ್ಲಿ ೩ ಶಾಸನಗಳು ಸಿಕ್ಕಿವೆ.** ಮೊದಲನೇಯ ಶಾಸನ **೧೦೨೮ ರ ಶಾಸನ ಮಹಾಮಂಡಳೇಶ್ವರ ಕಳಚೂರಿ ಹೆರ್ಮಾಡಿಯರಸರು ತರ್ದವಾಡಿ ನಾಡನ್ನು ಆಳುತ್ತಿದ್ದಾಗ** ಮಹಾ ಪ್ರಧಾನ ಸಾಯಿಮಯ್ಯನ ಶ್ರೀಕರಣನಾದ ನೀಲಕಂಠ ನಾಯಕನು ಉತ್ತಮ ಅಗ್ರಹಾರವಾದ ಇಂಗಳೇಶ್ವರದಲ್ಲಿ ತ್ರಿಕೂಟ ನೀಲಕಂಠೇಶ್ವರ (ನಾರಾಯಣ ದೇವಾಲಯ ಹೀರೆಮಠ ಪಕ್ಕ) ದೇವಾಲಯವನ್ನು ನಿರ್ಮಿಸಿ ದೇವರ ಸೇವೆಗೆಂದು ಆರುವಣವಾಗಿ ಪಿರಿಯ ಕೋಲಲ್ಲಿ ಅಳೆದುಬಿಟ್ಟ ೧೦೦ ಮತ್ತರು ಕರಿಯ ನೆಲ ಒಂದು ಹೂದೋಟ ಹಾಗೂ ಎರಡು ಗಾಣಗಳನ್ನು ದಾನ ಬಿಟ್ಟ ವಿಷಯವನ್ನು ದಾಖಲಿಸಿದೆ. ಇದು **ನಾರಾಯಣ ದೇವರ ಗುಡಿಯಲ್ಲಿದೆ.** ನಂತರ ವಿಜಯಪುರದ ವಸ್ತು ಸಂಗ್ರಹಾಲಯದಲ್ಲಿರುವ **೧೧೨೯** ರ ಶಾಸನ ಪ್ರಕಾರ **ಮಹಾಮಂಡಳೇಶ್ವರ ತಿಕಾಡ ಪೆರ್ಮಾಡಿ ದೇವರಸನು ತರ್ದವಾಡಿ ೧೦೦೦ ವನ್ನು ಆಳುತ್ತಿದ್ದಾಗ** ಸಿನ್ದಿಗೆಯ ಮೂಲಸ್ಥಾನ ದೇವರಿಗೆ ದಾನ ನೀಡಿದ ಬಗ್ಗೆ ತಿಳಿಸುತ್ತದೆ.

ಮುಂದೆ **ಇಂಗಳೇಶ್ವರದ ೧೧೩೭ ರ ಶಾಸನ ಮುಮ್ಮಡಿ ಸೋಮೇಶ್ವರನನ್ನು ಸರ್ವಜ್ಞ ಚಕ್ರವರ್ತಿ ಎಂದು ಕರೆಯುತ್ತಾ** ದೊಂಕನಕೇರಿಯ ಮಹಾಜನರು

ಹಾಗೂ ಸೇನಬೋವರು ಬ್ರಾಹ್ಮಣರ ಭೋಜನಕ್ಕೆಂದು ೧೬ ಕಟಕ ಗದ್ಯಾಣ ಹಾಗೂ ೪ ಗುಳಿಕೆಗಳನ್ನು ದಾನ ಬಿಟ್ಟ ವಿಚಾರವನ್ನು ತಿಳಿಸುತ್ತದೆ ಈ ಶಾಸನದಿಂದ ಗುಳಿಕೆ ಎಂಬ ಸಣ್ಣ ಮೌಲ್ಯದ ನಾಣ್ಯ ಚಲಾವಣೆಯಲ್ಲಿದ್ದ ಅಂಶ ಗೊತ್ತಾಗುತ್ತದೆ, ಒಂದು ಗದ್ಯಾಣ ಹನ್ನೆರಡು ಗುಳಿಕೆಗಳಿಗೆ ಸಮನಾಗಿದ್ದಂತೆ ಕಂಡು ಬರುತ್ತದೆ.

ಇವನ ನಂತರ ಮಗ ಇಮ್ಮಡಿ ಜಗದೇಕಮಲ್ಲ ಅಧಿಕಾರಕ್ಕೆ ಬಂದ.

ಇಲ್ಲಿ ವಿಶ್ಲೇಷಿಸುವ ಅಂಶವೇನೆಂದರೆ ನಮ್ಮ ಇಂಗಳೇಶ್ವರದ ಇತಿಹಾಸ ಶಾಸನದ ಸಮೇತವಾಗಿ ಮುಮ್ಮಡಿ (ಮೂರನೆಯ) ಸೋಮೇಶ್ವರನ ಅಧಿಕಾರವಧಿಯಲ್ಲಿ ಕಂಡು ಬರುತ್ತದೆ. ಕಲಚೂರಿ ಮನೆತನದ **ಹೆರ್ಮಾಡರಸನು ಇಲ್ಲಿ ಮೊದಲಿಗೆ ಆಡಳಿತ ಮಾಡಿದ ಸಾಮಂತ ಅರಸನಾಗಿದ್ದಾನೆ** ಅದೇ ತರನಾಗಿ ನಾರಾಯಣ ದೇವರ ಗುಡಿ (ನೀಲಕಂಠೇಶ್ವರ) ಮೂಲದಲ್ಲಿ ಇತ್ತು ಎಂದು ತಿಳಿಯುತ್ತದೆ.

ನೀಲಕಂಠ ನಾಯಕನು ಉತ್ತಮ ಅಗ್ರಹಾರವಾದ ಇಂಗಳೇಶ್ವರದಲ್ಲಿ ತ್ರಿಕೂಟ ನೀಲಕಂಠೇಶ್ವರ ದೇವಾಲಯವನ್ನು ನಿರ್ಮಿಸಿದ ಎಂದು ತಿಳಿಯುತ್ತದೆ. (ಚಾವಡಿಯ ಬಳಿ) ಈ ನೀಲಕಂಠ ನಾಯಕ ಬೇರೆ ಯಾರು ಅಲ್ಲ ಅವನೇ ಮಾದಲಾಂಬಿಕೆಯ ಅಣ್ಣ. ಇವನ ಮಗನೇ ಶಿವದೇವ ಈ ಶಿವದೇವನಿಗೆ ಅಕ್ಕನಾಗಮ್ಮ ಕೊಟ್ಟು ಮದುವೆ ಮಾಡಿದರು, ಆ ದಂಪತಿಗಳ ಮಗನೇ ಅವಿರಳಜ್ಞಾನಿ ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣ.

ಈ ನಾರಾಯಣ ಗುಡಿಗೆ ಸಂಬಂಧಿಸಿದಂತೆ ಊರಿನಲ್ಲಿ ಒಂದು ದಂತ ಕಥೆಯಿದೆ ಆ ಕಥೆಯು ಹೀಗಿದೆ.







ಇಂಗಳೇಶ್ವರ ಗಿರಿ ಅಳಿಯದು ಸಿರಿ

**ಇಂಗಳೇಶ್ವರದಲ್ಲಿ ಚೌಡೇಶ್ವರಿ ಹಾಗೂ ನಾರಾಯಣದೇವರ ದಂತ ಕತೆ :**

ಒಂದಾನೊಂದು ಕಾಲದಲ್ಲಿ ಇಂಗಳೇಶ್ವರ ಗ್ರಾಮದಲ್ಲಿ ಶ್ರೀ ಚೌಡೇಶ್ವರಿ ಜಾತ್ರೆಯನ್ನು ಎಲ್ಲಾ ವರ್ಗದ ಜನರು ಉತ್ಸಾಹದಿಂದ ಕೂಡಿಕೊಂಡು ವಿಜ್ರಂಭಣೆಯಿಂದ ಜಾತ್ರೆಯನ್ನು ಮಾಡುತ್ತಿರುವಾಗ ಒಬ್ಬ ವ್ಯಕ್ತಿ ಜನರ ಮಧ್ಯದಿಂದ ಓಡಹತ್ತಿದ ಎಲ್ಲರಿಗೂ ಗಾಬರಿಯಾಗಿ ಯಾಕೆ ಹೀಗೆ ಓಡುತ್ತಿದ್ದಾನೆ ಎಂದುಕೊಳ್ಳುವಾಗ ಶ್ರೀ ಚೌಡೇಶ್ವರ ತಾಯಿಯ ಬಾಳ ಬಟ್ಟಲವನ್ನು ಕದ್ದ ವಿಷಯ ತಿಳಿದ ಜನ ಅವನ ಬೆನ್ನು ಹತ್ತುವರು ಅವನು ಡೋಣುರ ಗ್ರಾಮ ದಾರಿ ಹಿಡಿದು ವೇಗವಾಗಿ ಓಡಹತ್ತಿದ ಎಲ್ಲರೂ ಓಡಹತ್ತಿದರು ಇನ್ನೇನು ಸಿಕ್ಕ ಎನ್ನುವಷ್ಟರಲ್ಲಿ ವೇಗವಾಗಿ ಓಡತೊಡಗಿದ ಇಂಗಳೇಶ್ವರ ಹಾಗೂ ಡೋಣೂರ ಹೊಲದ ಸೀಮೆಯ ಮಧ್ಯ ಬಂದಾಗ ಇಂಗಳೇಶ್ವರದ ಜನರಲ್ಲಿಯ ಒಬ್ಬ ವ್ಯಕ್ತಿ ಕೊಡಲಿಯಿಂದ ಬಿಸಿದಾಗ ಅವನ ಕೈಗೆ ತಾಕಿ ರಕ್ತ ಬರತೊಡಗಿತು ಆಗ ಅವನು ತನ್ನ ಕೈಯಲ್ಲಿ ಇದ್ದ ಆ ಬಾಳ ಬಟ್ಟಲವನ್ನು ಡೋಣೂರ ಗ್ರಾಮದ ಸೀಮೆಯಲ್ಲಿ ಓಗೆಯುತ್ತಾನೆ. ಆಗ ಇಂಗಳೇಶ್ವರ ಜನ ನಮ್ಮ ಸೀಮೆಯನ್ನು ದಾಟಿದ ಬಾಳ ಬಟ್ಟಲ ಹೋಗಿದ್ದರಿಂದ ನಾವು ಆ ಬಾಳ ಬಟ್ಟಲವನ್ನು ತರಬಾರದು ಎಂದು ಅಲ್ಲೆ ಬಿಟ್ಟು ಇಂಗಳೇಶ್ವರಕ್ಕೆ ಮರುಳಿದರು. ಆ ಬಾಳ ಬಟ್ಟಲ ಕದ್ದ ವ್ಯಕ್ತಿಯ ಹೆಸರು ನಂದಪ್ಪ ಈಗಲೂ ಎರಡು ಊರಿನ ಮಧ್ಯದಲ್ಲಿರುವ ಹೊಲದ ಸೀಮಿಯ ಸ್ಥಳಕ್ಕೆ ನಂದಪ್ಪನ ನಂಬ್ರಾ ಎಂದು ಕರೆಯುತ್ತಾರೆ.

ಇದಾದ ಕೆಲವು ವರ್ಷಗಳಲ್ಲಿ ನಮ್ಮ ಇಂಗಳೇಶ್ವರದ ವಡ್ಡರ(ಬೋವಿ) ಜನಾಂಗ ವ್ಯಕ್ತಿ ಡೋಣೂರ ಗ್ರಾಮಕ್ಕೆ ಕಲ್ಲು ಗಡಾಯಿ ಮಾಡಲು ಕೋಣದ ಗಾಡಿಯನ್ನು ತಗೆದುಕೊಂಡು ಹೋಗುತ್ತಿದ್ದ. ಒಂದು ದಿನ ರಾತ್ರಿ ಡೋಣೂರ ಗ್ರಾಮದಲ್ಲಿ ವಸ್ತಿ ಮಾಡಿದ ಅಲ್ಲಿ ಇರುವ ನಾರಾಯಣ ದೇವರ ವಿಗ್ರಹವನ್ನು ಎತ್ತಿನ ಆಹಾರವಾದ ಜೋಳದ ಕಣಕಿಯಲ್ಲಿ ಕಟ್ಟಿಕೊಂಡು ಗಾಡಿಯನ್ನು ಓಡಿಸಿಕೊಂಡು ಬರುವಾಗ ಏ... ನಿಮ್ಮೂರ ನಾರಾಯಣಪ್ಪನ ನಮ್ಮೂರಿಗೆ ವಯ್ಯತ್ತಿದ್ದೇನಲೇ... ಎಂದು ಕೂಗು ಹೊಡೆದನು. ಇದನ್ನು ಅರಿತ ಡೋಣೂರ ಜನ ಇವನಿಗೆ ಬೆನ್ನು ಹತ್ತಿದರು ನಮ್ಮ ಊರ ಸೀಮೆಯ ವರೆಗೆ ಬೆನ್ನು ಹತ್ತಿದರು ಇವನೂ ಸಹ ನಮ್ಮ ಇಂಗಳೇಶ್ವರ ಸೀಮಿಯನ್ನು ದಾಟಿದ ಇದರಿಂದ ಡೋಣೂರಿನವರು ಸಹ ಅವನಿಗೆ ಎನು ಮಾಡದೆ ಸುಮ್ಮನೆ ಅವರ ಗ್ರಾಮಕ್ಕೆ ಮರುಳಿದರು.

ಆ ವಿಗ್ರಹವನ್ನು ತಂದು ಇಂಗಳೇಶ್ವರದಲ್ಲಿ ತೋರಿಸಿದಾಗ ಎಲ್ಲರೂ ಕೂಡಿಕೊಂಡು ಆ ವಿಗ್ರಹವನ್ನು ಚಾವಡಿಯ ಹತ್ತಿರ ಇರುವ ಶ್ರೀ

ನೀಲಕಂಠೇಶ್ವರ ದೇವಾಲಯದಲ್ಲಿಟ್ಟರು ಮುಂದೆ ಈ ಗುಡಿಯನ್ನು ನಾರಾಯಣ್ಣಪ್ಪನ ಗುಡಿ ಎಂದು ಕರೆಯಲು ಪ್ರಾರಂಭ ಮಾಡಿದರು. ಈ ನಾರಾಯಣ ದೇವರ ವಿಗ್ರಹ ನೋಡಲು ಬಹಳ ಸುಂದರವಾದ ವಿಷ್ಣು ಮೂರ್ತಿಯಾಗಿದೆ. ಸುತ್ತಲೂ ವಿಷ್ಣು ಜನ್ಮ ತಾಳಿದ ಹತ್ತು ಅವತಾರಗಳು ಹಾಗೂ ಹೋಮಗಳು ಮಾಡುತ್ತಿರುವ ಋಷಿಗಳ ಕೆತ್ತನೆಗಳು ಬಹಳ ನಯವಾಗಿ ಸೂಕ್ಷ್ಮವಾಗಿ ಕೆತ್ತಲಾಗಿದೆ ಈ ಮೂರ್ತಿಯನ್ನು ಕೆತ್ತಿದ ಕಲಾವಿದನಿಗೆ ಒಂದು ಸಲಾಮ ಹೇಳಲೇಬೇಕು.

ಈಗಲೂ ಡೋಣೂರ ಗ್ರಾಮದ ಜನ ಶ್ರೀ ಚೌಡೇಶ್ವರಿಯ ಜಾತ್ರೆಗೆ ಇಂಗಳೇಶ್ವರದವರನ್ನು ಬರದಂತೆ ನೋಡಿಕೊಳ್ಳುತ್ತಾರೆ ! ಅದರಂತೆ ಆ ಕಾಲದಲ್ಲಿ ನಿಂತ ಜಾತ್ರೆಯನ್ನು ಇಂಗಳೇಶ್ವರದಲ್ಲಿ ಮತ್ತೆ ಕುಂಬಾರ ಜನಾಂಗ ಮತ್ತು ಗ್ರಾಮಸ್ಥರೆಲ್ಲರೂ ಕೂಡಿಕೊಂಡು ೨೦೧೬–೨೦೧೭ ರಲ್ಲಿ ಮತ್ತೆ ಗುಡಿಯನ್ನು ಕಟ್ಟಿ ಜಾತ್ರೆಯನ್ನು ಮಾಡುತ್ತಿದ್ದಾರೆ.

ಆದರೆ ನಾರಾಯಣ ದೇವರ ಹಾಗೂ ಚೌಡೇಶ್ವರಿಯ ದೇವರ ಈ ಕಥೆ ನಿಜವಾಗಲೂ ನಡೆದಿದೆಯಾ ಎಂಬ ಸಂಶಯ ಮೂಡುತ್ತದೆ. ಶಾಸನಗಳಲ್ಲಿ ಇದನ್ನು ನೀಲಕಂಠ ನಾಯಕ ನೀಲಕಂಠೇಶ್ವರ ದೇವಾಲಯವನ್ನು ನಿರ್ಮಿಸಿದ ಬಗ್ಗೆ ಉಲ್ಲೇಖಿಸಲಾಗಿದೆ. ಆದರೆ ಗುಡಿಯ ದ್ವಾರ ಬಾಗಿಲ ಮೇಲೆ ಗರುಡವಾಹನ ಮೂರ್ತಿ ಇದೆ. ಅದರಂತೆ ವೈಷ್ಣವರಿಗೆ ಸಂಬಂಧಿಸಿದ ಶಾಸನ ಕೃಷ್ಣನು ಇರುವ ಶಾಸನ ಇದೆ ಈ ಗರುಡ ಮೂರ್ತಿಯು ವಿಷ್ಣುವಿನ ವಾಹನ. ನಾರಾಯಣ ದೇವರ ಗರ್ಭಗುಡಿಯ ಮುಂದೆ ಹಣಮಂತ ದೇವರ ಮೂರ್ತಿ ಹಾಗೂ ಗುಡಿಯ ಹಿಂದೆ ಇರುವ ಗೋಡೆಯ ಮೇಲೂ ಹಣಮಂತ ದೇವರ ಮೂರ್ತಿ ಇವೆ. ಇದರಿಂದ ಈ ದೇವಾಲಯದ ಬಗ್ಗೆ ಸ್ವಲ್ಪ ಮಟ್ಟಿನ ಗೊಂದಲವಿದೆ ಎಂದು ಹೇಳಬಹುದು.



**ನಾರಾಯಣ ದೇವಾಲಯದ ದ್ವಾರ ಬಾಗಿಲ ಮೇಲಿರುವ ವಿಷ್ಣುವಾಹನದ ಶಿಲ್ಪ.**





## ಇಮ್ಮಡಿ (೨ನೇ)ಜಗದೇಕಮಲ್ಲ :

ಇವನು ಅಧಿಕಾರಕ್ಕೆ ಬಂದಾಗ ವಯಸ್ಸಾಗಿತ್ತು ಇದರಿಂದ ಹಲವಾರು ಸಾಮಂತರು ನೆರೆಹೊರೆಯ ರಾಜರು ಸ್ವಾತಂತ್ರಕ್ಕಾಗಿ ಹವಣಿಸುತ್ತಿದ್ದರು. ಇವನ ಆಳ್ವಿಕೆಯಲ್ಲಿ ಹಲವಾರು ದಾನ ದತ್ತಿಯನ್ನು ನೀಡಿದ್ದಾನೆ. ಇವನ ಆಳ್ವಿಕೆಗೆ ಸಂಬಂಧಿಸಿದಂತೆ ಸುಮಾರು ೨೦ ಶಾಸನಗಳು ನಮ್ಮ ಜಿಲ್ಲೆಯಲ್ಲಿ ಸಿಕ್ಕಿವೆ.ಕತಕನಹಳ್ಳಿ ದೇವರ ನಾವದಗಿ, ಸಾಲೋಟಗಿ, ಹಂದರಗಲ್ಲು, ಮುತ್ತಗಿ, ಯರಗಲ್, ಮಲಘಾಣ, ಶಿರೂರ, ಹೆರಕಲ್, ಮುಂತಾದ ಸ್ಥಳದಲ್ಲಿ ದೇವಾಲಯ ನಿರ್ಮಾಣಗೊಂಡವು. ಇವನ ನಂತರ ಸಹೋದರ ಮೂರನೆಯ ತೈಲಪ ಅಧಿಕಾರಕ್ಕೆ ಬಂದ.

## ಮೂರನೆಯ ತೈಲಪ (೧೧೪೯–೧೧೬೯) :

ಇವನ ಆಳ್ವಿಕೆಗೆ ಸಂಬಂಧಪಟ್ಟ ೮ ಶಾಸಗಳು ಸಿಕ್ಕಿವೆ. ಆರ್ಕಿಲ್ಲಾದಲ್ಲಿರುವ ೧೧೫೧ ಶಾಸನ ಹಲವಾರು ರಾಜರ ಮೇಲೆ ಗೆಲವು ಸಾಧಿಸಿದ್ದನ್ನು ತಿಳಿಸುತ್ತದೆ ಅದೇ ತೆರನಾಗಿ **ಮೈಲಾರದಂಡಾಧಿಪತಿಯು ತರ್ದವಾಡಿ ೧೦೦೦ ನಾಡನ್ನು ಆಳುತ್ತಿದ್ದಾಗ** ವಿಜಯಪುರದ ಜಲಮಂಟಪದ ನರಸಿಂಹದೇವರಿಗೆ ಭೂ ದಾನ ಕೊಟ್ಟಿದ್ದನ್ನು ತಿಳಿಸುತ್ತದೆ. ೧೧೫೪ ರ ಇನ್ನೊಂದು ಶಾಸನ, ಅರಸನು ಕಲ್ಯಾಣವನ್ನು ಆಳುತ್ತಿದ್ದಾಗ **ಬಿಜ್ಜಭೂಪಾಳನ ಪ್ರಥಮ ಲೆಂಕೇಶ್ವರನಾದ ಮಾಂಡಲೀಕ ಚಿಲ್ಲಣದಂಡಾನಾಯಕರು ತರ್ದವಾಡಿ ೧೦೦೦ ವನ್ನು ಆಳುತ್ತಿದ್ದನು.**

**ಇಂಗಳೇಶ್ವರದ ಕಲ್ಲಪ್ಪನ ಬಾವಿ ಬಳಿಯಿರುವ ೧೧೬೦ ಶಾಸನ ಮಲ್ಲಿನಾಥ ಶಿಲಾಮಂದಿರವನ್ನು ಶಶಿನಾಥ (ಚಂದ್ರ) ಬಸದಿಯ ಸುರೇಶ್ವರ ಪಂಡಿತರು ನಿರ್ಮಿಸಿದ ವಿಷಯವನ್ನು ದಾಖಲಿಸಿದೆ.** ಜಗದೇಕಮಲ್ಲನ ಕಾಲದಲ್ಲಿಯೇ ಅಧಿಕಾರಕ್ಕಾಗಿ ಹವಣಿಸುತ್ತಿದ್ದರು ನಂತರ ಕಾಲ ಕೂಡಿ ಬಂದಿತು ತ್ರಿಭುವನಮಲ್ಲ ವೀರಗಂಗ ತ್ರೈಲೋಕ್ಯ ಮುಂತಾದ ಬಿರುದುಗಳು ಇದ್ದವು ಇಷ್ಟಿದ್ದರು ಕಳಚೂರಿ ಬಿಜ್ಜಳನಿಂದ ಪದಚ್ಯುತಿಗೊಂಡನು ನಂತರ ಮೂರು ದಶಕಗಳ ಕಾಲ ಕಲಚೂರಿಗಳು ಆಳ್ವಿಕೆ ಮಾಡಿದರು ಮುಂದೆ ೧೧೮೨ ರಲ್ಲಿ ಬಂದ ನಾಲ್ಕನೆಯ ಸೋಮೇಶ್ವರನು ಅಧಿಕಾರಕ್ಕೆ ಬಂದ

## ನಾಲ್ಕನೆಯ ಸೋಮೇಶ್ವರ :

ಚಾಲುಕ್ಯರ ಸಾಮಂತ ಹಾಗೂ ರಕ್ತ ಸಂಬಂಧಿಯಾದ ಇಮ್ಮಡಿ ಬಿಜ್ಜಳ ಮುಮ್ಮಡಿ ತೈಲಪನಿಂದ ಚಾಲುಕ್ಯ ಸಿಂಹಾಸನ ಕಸೆದುಕೊಂಡು ಸುಮಾರು

ಮೂರು ದಶಕದ ವರೆಗೂ ರಾಜ್ಯಭಾರಮಾಡಿದ ಬಸವಣ್ಣನವರು ಕಲ್ಯಾಣದ ಕ್ರಾಂತಿ ಮಾಡಿದಾಗ ಹಲವಾರು ಶರಣರು ಕೊಂದಾಗ ಸಿಟ್ಟಿಗೆದ್ದ ಶರಣರು ಬಿಜ್ಜಳನನ್ನು ಕೊಂದರು. ಅವನ ಮಕ್ಕಳು ರಾಯಮುರಾರಿ ಸೋವಿದೇವ ಹಾಗೂ ಇನ್ನಿತರರು ಅಧಿಕಾರಕ್ಕೆ ಜಗಳವಾಡುವಾಗ ಇದೇ ಒಳ್ಳೆಯ ಸಂದರ್ಭ ಎಂದು ನಾಲ್ಕನೆಯ ಸೋಮೇಶ್ವರ ೧೧೮೩ ರಲ್ಲಿ ಕಳಚೂರಿಗಳನ್ನು ಸೆದೆಬಡೆದು ಮತ್ತೆ ಸಿಂಹಾಸನವೇರಿದ. ಇವನ ೧೦ ಶಾಸನಗಳು ನಮ್ಮ ಜಿಲ್ಲೆಯಲ್ಲಿ ಸಿಕ್ಕಿವೆ ಇವನು ಹತ್ತು ಹಲವು ದಾನ ಧರ್ಮ ಮಾಡಿದ್ದಾನೆ ಬಾಗೇವಾಡಿ ತಾಲೂಕಿನ ಹುಲಿಬೆಂಚಿಯಲ್ಲಿ ಸಿಕ್ಕ ಶಾಸನ ಕಲಚೂರಿ ದ್ರೋಹರನ್ನು ಕೊಂದ ಲಾಟ, ಹೊಯ್ಸಳ, ಚೋಳ, ಚೇರ, ಹಾಗೂ ಮಾಳವರ ಮೇಲೆ ಬಮ್ಮಣ ದಂಡನಾಯಕ ವಿಜಯ ಸಾಧಿಸಿದ ಬಗ್ಗೆ ತಿಳಿಸುತ್ತದೆ. ಆದರೆ ಚಾಲುಕ್ಯರ ಸಾಮಂತ ಅರಸರಾದ **ಸೇವುಣರು** ಹಾಗೂ **ಹೊಯ್ಸಳರು** ಕಲ್ಯಾಣಕ್ಕಾಗಿ ಕತ್ತಿಮಸೆಯ ಹತ್ತಿದರು. ೧೧೯೨-೧೧೯೮ ರಲ್ಲಿ ಸೊರಟೂರಿನಲ್ಲಿ ನಡೆದ ಯುದ್ಧದಲ್ಲಿ ಸೇವುಣರ ಯಾದವ ಭಿಲ್ಲಮನು ಸೋತನು ಹೊಯ್ಸಳರ ಇಮ್ಮಡಿ ಬಲ್ಲಾಳ ಗೆದ್ದನು ಮುಂದೆ ೧೨೦೦ ರಲ್ಲಿ ಸೇವುಣರ ಭೀಲ್ಲಮನ ಮೊಮ್ಮಗ ಇಮ್ಮಡಿ ಸಿಂಘಣನು ಇಮ್ಮಡಿ ಬಲ್ಲಾಳ ಸೋಲಿಸಿದ ಇದರಿಂದ ತುಂಭದ್ರ ನದಿಯಿಂದ ದಕ್ಷಿಣಕ್ಕೆ ಹೊಯ್ಸಳರು ಉತ್ತರಕ್ಕೆ ಸೇವುಣರು ಆಳ್ವಿಕೆ ನಡೆಸಿದರು.

## ಕಳಚೂರಿಗಳು :

ಕಲ್ಯಾಣದ ಚಾಲುಕ್ಯರ ಮನೆತನದಲ್ಲಿ ಸಾಮಂತ ಅರಸರಾಗಿ ಬಂದವರು ಈ ಕಲಚೂರಿಗಳು. ಇವರ ಪೂರ್ವದ ಇತಿಹಾಸವನ್ನು ತಿಳಿದುಕೊಳ್ಳುವದಾದರೆ ಕ್ರಿ.ಶ ೧೧೭೪ ರ ಬಂದಳಿಕೆ ಶಾಸನ ಪ್ರಕಾರ ಅಶ್ವತ್ಥಾಮನ ಶಿಷ್ಯ ಸೋಮನೆಂಬುವನು ಈ ಕುಲದ ಸ್ಥಾಪಕ. ಪರಸುರಾಮ ತನ್ನ ತಂದೆಯಾದ ಜಮದಗ್ನಿ ಮುನಿಯನ್ನು ಕ್ಷತ್ರೀಯ ರಾಜ ಕಾರ್ತಿವಿರ್‍ಯಾರ್ಜುನನು ಕೊಂದಾಗ ಈ ಭೂಮಿಯ ಮೇಲೆ ಕ್ಷತ್ರೀಯ ರಾಜನನ್ನು ಒಬ್ಬನು ಬಿಡುವದಿಲ್ಲ ಎಂದು ಶಪತ ಮಾಡಿ ಭೂಮಂಡದಲ್ಲಿ ಆಡಳಿತ ನಡೆಸುತ್ತಿರುವ ಕ್ಷತ್ರೀಯ ದೊರೆಗಳನ್ನು ಕೊಲ್ಲುತ್ತಾ ಹೊರಟ. ಇದನ್ನು ತಿಳಿದ ಸೋಮನಿಗೆ ಭಯಯುಂಟಾಗಿ ತಮ್ಮ ಗುರುಗಳ ಬಳಿ ಬಂದು ಕೇಳಿದಾಗ ಗುರುಗಳು ನೀವು ಗಡ್ಡ ಮೀಸೆಯನ್ನು ಬಿಟ್ಟು ಬ್ರಾಹ್ಮಣರಂತೆ ನಟಿಸಿ ಪ್ರಾಣ ರಕ್ಷಿಸಿಕೊಳ್ಳಿ ಎಂದಾಗ ಗುರುವಿನ ಆಜ್ಞೆಯಂತೆ ಕಲಿ(ಉದ್ದವಾದ) ಚೂರಿ(ಚಾಕು) ಎಂಬ ಹೆಸರನ್ನು ಪಡೆದುಕೊಂಡು ಕಲಚೂರಿಗಳಾದರು.





ಮುಂದೆ ಇವರು ಅನೇಕ ಶಾಖೆಗಳಾಗಿ ವಿಂಗಡಣೆಯಾದವು ಅವುಗಳು ಚೇದಿ ಕಲಚೂರಿಗಳು, ಗೋರಖಪುರದ ಕಲಚೂರಿಗಳು, ರತ್ನಪುರದ ಕಲಚೂರಿಗಳು. ಇವರುಗಳಲ್ಲಿ ದಕ್ಷಿಣಕ್ಕೆ ವಲಸೆ ಬಂದ ಚೇದಿ ಕಲಚೂರಿಗಳು ಬಾದಾಮಿ ಚಾಲುಕ್ಯರ, ರಾಷ್ಟ್ರಕೂಟರ, ಕಲ್ಯಾಣಿ ಚಾಲುಕ್ಯರ, ಸಾಮಂತ ಅರಸರಾಗಿ ಕೆಲಸ ಮಾಡಿದರು ಮುಂದೆ ಇವರ ಪ್ರಮುಖವಾದ ದೊರೆ ಜೋಗಮ. ಈ ಜೋಗಮ ಕಲ್ಯಾಣ ಚಾಲುಕ್ಯರ ದೊರೆ ಆರನೇಯ ವಿಕ್ರಮಾದಿತ್ಯನಿಗೆ ತನ್ನ ಮಗಳಾದ ಸಾವಳದೇವಿಯನ್ನು ಕೊಟ್ಟು ಮದುವೆ ಮಾಡಿದ. ಮುಂದೆ ಆರನೇಯ ವಿಕ್ರಮಾದಿತ್ಯ ತನ್ನ ಮಗಳಾದ ನಾಗಲಾದೇವಿಯನ್ನು ಜೋಗಮನ ಮಗನಾದ ಪೆರ್ಮಾಡಿಗೆ ಕೊಟ್ಟು ವಿವಾಹ ಮಾಡಿದ ಇದರಿಂದ ಕಳಚೂರಿಗಳು ಕಲ್ಯಾಣದ ದೊರೆಗಳ ಜೊತೆ ಸರಿಸಮಾನಾದರು. ಆರನೇ ವಿಕ್ರಮಾದಿತ್ಯನ ಮರಣದ ನಂತರ ಅಧಿಕಾರಕ್ಕೆ ಬಂದ ಮೂರನೇಯ ಸೋಮೇಶ್ವರನ ಕಾಲದಲ್ಲಿ ಇವರು ಬಲಿಷ್ಠರಾದರು. ಅದಕ್ಕೆ ಪುಷ್ಠಿ ನೀಡುವಂತೆ. ತದಲಬಾಗಿಯ ಈಶ್ವರ ಗುಡಿ ಮುಂದೆ ಇರುವ ಶಾಸನ ಚಾಲುಕ್ಯ ಮುಮ್ಮಡಿ ಸೋಮೇಶ್ವರನ ಹೆಸರನ್ನು ಉಲ್ಲೇಖವಿಲ್ಲದೆ ಪೇರ್ಮಾಡಿ ದೇವನ ಮಹಾಮಂಡಳೇಶ್ವರ ಎಂದು ದಾಖಲಿಸಿದೆ.

## ಇಮ್ಮಡಿ ಬಿಜ್ಜಳ :

ಪೆರ್ಮಾಡಿ ದೇವನ ಅಧಿಕಾರದಲ್ಲಿ ಪ್ರಬಲನಾದವನು ಬಿಜ್ಜಳ. ಈತ ಚಾಲುಕ್ಯರ ವೈವಾಹಿಕ ಸಂಬಂಧ ಹೊಂದಿದ್ದು ಮತ್ತು ಮುಮ್ಮಡಿ ತೈಲಪನ ಆಳ್ವಿಕೆಯಲ್ಲಿ ಅಸಂತೃಪ್ತಗೊಂಡ ಸಾಮಂತ ಅರಸರನ್ನು ತಮ್ಮೆಡೆಗೆ ಸೆಳೆದುಕೊಂಡು ಚಾಲುಕ್ಯರ ಮುಮ್ಮಡಿ ತೈಲಪನ ರಾಜಕೀಯದಲ್ಲಿ' ಹಲವಾರು ಗೊಂದಲ ಸೃಷ್ಠಿಸಿ ಇದರ ಲಾಭ ಪಡೆದುಕೊಂಡು ತೈಲಪನ ಮರಣದ ನಂತರ ಸ್ವತಂತ್ರ್ಯವಾಗಿ ಇಮ್ಮಡಿ ಬಿಜ್ಜಳ ಅಧಿಕಾರ ವಹಿಸಿಕೊಂಡ. ಇವನ ಬಗ್ಗೆ ತಿಳಿಸುವ ಸುಮಾರು ೨೦ ಶಾಸನಗಳು ಇವೆ ಇದರಲ್ಲಿ ಎರಡು ಶಾಸನಗಳು ಮಹಾಮಂಡಳೇಶ್ವರ ಎಂದು ಕರೆದರೆ ಇನ್ನುಳಿದ ಶಾಸನಗಳು ಚಕ್ರಾಧಿಪತಿ ಎಂದಿವೆ. ಇವನ ಆಳ್ವಿಕೆಯಲ್ಲಿ ೧,೯೬೦೦೦ ವಚನ ಸಾಹಿತ್ಯದ ಸಾಗರವೇ ಹರಿಯಿತು. ಅದಕ್ಕೆ ಕಾರಣ ಯಾರೆಂದರೆ ಬಸವಣ್ಣ ಎಂಬ ಮಹಾನ್ ನಾಯಕ "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ " ಎಂದು ಸಾರಿದ ಸಮಾನತೆಯ ಹರಿಕಾರ ಕುಲಕೊಬ್ಬ ಶರಣರನ್ನು ತಯಾರಿಸಿದ ಕೀರ್ತಿ ಪಡೆದ ಮಹಾ ಮಾನವತಾವಾದಿ ಬಸವಣ್ಣ ಹಾಗೂ ಅವನ ಸಮಕಾಲಿನ ಶರಣರ

ವಚನಗಳು ಇನ್ನು ಮುಂದೆ ೧೦೦ ವರ್ಷ ಕಳೆದರು ವಚನಗಳು ಜನರ ಜೀವನದಲ್ಲಿ ಅನ್ವಯವಾಗುತ್ತವೆ. ಇಮ್ಮಡಿಯ ಬಿಜ್ಜಳನಿಗೆ ಸಂಬಂಧಿಸಿದ ಸುಮಾರು ೨೦ ಶಾಸನಗಳು ಸಿಕ್ಕಿವೆ

ಇಂಗಳೇಶ್ವರದ ಅಗ್ಗಳ ಕವಿಯ ಬಗ್ಗೆ ತಿಳಿಸುವ ಶಾಸನ ಇವನ ಕಾಲದ್ದೇ. ಹಲವಾರು ದಾನ ದತ್ತಿಯನ್ನು ನೀಡಿದ್ದಾನೆ. ಇವನ ಆಳ್ವಿಕೆಯಲ್ಲಿ ಬಸವಣ್ಣನ ಏಳಿಗೆ ಸಹಿಸದೆ ಅವನ ವಿರುದ್ಧ ಸಂಚು ರೂಪಿಸುತ್ತಿದ್ದ ಸಂಚು ಕೋರರಿಗೆ ಬ್ರಾಹ್ಮಣ ಮಧುವರಸನ ಮಗಳು ಸಮಗಾರ ಹರಳಯ್ಯನ ಮಗನ ವೈವಾಹಿಕ ಸಂಬಂಧ ಬೆಳೆಸಿದ್ದನ್ನು ಕಂಡ ಇವರು ಇದೇ ಕೊನೆ ಅಸ್ತ್ರವಾಗಿ ಬಳಸಿಕೊಂಡು ಬಿಜ್ಜಳನ ಬಳಿ ದೂರು ಹೇಳಿದರು. ಬಿಜ್ಜಳನ ಮಾತನ್ನೇ ಕೇಳದ ಜನ ಬಸವಣ್ಣನವರ ಮಾತನ್ನೇ ಕೇಳುತ್ತಿದ್ದರು ಅದರಿಂದ ಬಿಜ್ಜಳನು ಸಹ ಬಸವಣ್ಣನನ ಬಗ್ಗೆ ಅಸಮಾಧಾನಗೊಂಡಿದ್ದ. ಈ ಅಂತರ್ಜಾತಿ ವಿವಾಹ ಮಾಡಿದ್ದರಿಂದ ಸಿಟ್ಟಿಗೆ ಬಂದು ಬಿಜ್ಜಳ ಆ ವಧು ವರರ ಕಣ್ಣು ಕೀಳಿಸಿ ಎಂದು ಆಜ್ಞೆ ಮಾಡಿದ. ಇದರಿಂದ ಹಲವಾರು ದಂಗೆಗಳು ಎದ್ದವು ಶರಣರನ್ನು ಆನೆಯ ಕಾಲಿಗೆ ಕಟ್ಟಿ ಎಳೆಹೂಟೆ ಶಿಕ್ಷೆ ನೀಡಿದರು ಬಸವಣ್ಣ "ಕಲ್ಯಾಣ ಕಟಕರ ಕೇರಿಯಾಗಲಿ" ಎಂದು ಹೇಳಿ ಸಂಗಮದ ದಾರಿ ಹಿಡಿದ ಇದರಿಂದ ಸಿಟ್ಟಿಗೆದ್ದ ಶರಣರು ಜಗದೇವ ಹಾಗೂ ಮಲ್ಲಿದೇವರ ಮುಂದಾಳತ್ವದಲ್ಲಿ ಬಿಜ್ಜಳನನ್ನು ಹೊಡೆದು ಕೊಂದು ಹಾಕಿದರು.

ಬಿಜ್ಜಳನಿಗೆ ಇಬ್ಬರು ರಾಣಿಯರು ಇಬ್ಬರು ಹೆಣ್ಣು ಮಕ್ಕಳು ಆರು ಜನ ಗಂಡು ಮಕ್ಕಳು ಇವರಲ್ಲಿ ಮೊದಲನೇಯವನು ವಜ್ರದೇವ, ರಾಯಮುರಾರಿ ಸೋವಿದೇವ, ಮಲ್ಲಿಕಾರ್ಜುನ, ಸಂಕಮ, ಅಹವಮಲ್ಲ, ಸಿಂಘಣ.

ವಜ್ರದೇವ ತೀರಿ ಹೋಗಿದ್ದರಿಂದ ಬಿಜ್ಜಳನ ಪಟ್ಟಕ್ಕೆ ಮತ್ತೆ ಕಲಹ ಮೂಡಿತು ಇವನ ಸಹೋದರ ತಮ್ಮ ಮೈಲುಗಿ ಮತ್ತು ವಜ್ರದೇವನ ಮಗ ಕರ್ಣನು ಕಣ್ಣಿಟ್ಟಾಗ ಇವರನ್ನು ಸೆದೆಬಡೆದು ರಾಯಮುರಾರಿ ಸೋವಿದೇವ ಅಧಿಕಾರಕ್ಕೆ ಬಂದ.

## ರಾಯಮುರಾರಿ ಸೋವಿದೇವ :

ಬಿಜ್ಜಳ ತಮ್ಮ ಮೈಲುಗಿ ಮತ್ತು ವಜ್ರದೇವನ ಮಗ ಕರ್ಣನನ್ನು ಸೆದೆಬಡೆದು ರಾಯಮುರಾರಿ ಸೋವಿದೇವ ಅಧಿಕಾರಕ್ಕ ಬಂದ. ಇವನ ಆಳ್ವಿಕೆಗೆ ಸಂಬಂಧಿಸಿದಂತೆ ಸುಮಾರು ೨೫ ಶಾಸನಗಳು ನಮ್ಮ ಜಿಲ್ಲೆಯಲ್ಲಿ ಸಿಕ್ಕಿವೆ.,





ಮುತ್ತಗಿಯಲ್ಲಿ ೧೮ ಮತ್ತರ ಹೊಲವನ್ನು ದಾನ ನೀಡಿದ್ದು ಬಾಬಾನಗರದ ಬಸದಿಯ ಪೂಜಾವಿಧಿಗೆಂದು ಭೂಮಿ ನೀಡಿದ್ದು, ಅಗರಖೇಡದಲ್ಲಿ ಕೈಳಾಸೇಶ್ವರ ದೇವಾಲಯ ಕಟ್ಟಿಸಿದ್ದು ಬಾಗೇವಾಡಿಯ ಚನ್ನಕೇಶವ ದೇವಾಲಯಕ್ಕೆ ೧೦೦ ಮತ್ತರ ಭೂಮಿ ದಾನ ಬಿಟ್ಟಿದ್ದು ಹೀಗೆ ಹಲವಾರು ಶಾಸನಗಳ ಜೊತೆ **ನಮ್ಮ ಇಂಗಳೇಶ್ವರದಲ್ಲಿಯೂ ಸಹ ಇವನ ಶಾಸನ ವರದಿಯಾಗಿದೆ ೧೧೭೬ ರ ಶಾಸನ ಜನಮೇಜಯ ನಿರ್ಮಿತ ಅಗ್ರಹಾರ ಇಂಗಳೇಶ್ವರವು" ಕರ್ನಾಟಕ ಕಾಶಿಪುರವೆಂದು ಪ್ರಸಿದ್ದವಾಗಿದ್ದ ಅಂಶವನ್ನು ತಿಳಿಸುತ್ತದೆ. ಹಾಗೆ** ಕಾವಗೇರಿಯ ಸೋಮಣ್ಣನು ತ್ರಿಕೂಟ ದೇವಾಲಯವನ್ನು ನಿರ್ಮಿಸಿ ಅದರ ಸ್ಥಾಪನಾಚಾರ್ಯರಾದ ಧರ್ಮರಾಶಿಮುನಿಪರಿಗೆ ದಾನ ನೀಡಿದ ವಿಷಯವನ್ನು ದಾಖಲಿಸಿದೆ. ಇದೇ ಶಾಸನ ತೆಲ್ಲಿಗ ಕೊತ್ತಳಿಗಳು ಗಾಣಕ್ಕೆ ಪಳಿಗೆ ಎಣ್ಣೆಯನ್ನು ಸೇಣಿಗರ ಕೊತ್ತಳಿಗಳು ನೂಲಿಗೆ ವರ್ಷಕ್ಕೆ ಹಾಗವನ್ನು ದಕ್ಷಿಣ ವಾರಣಾಸಿ ವಿಜಯಪುರದ ಸ್ವಯಂಭು ಕೇಧಾರೇಶ್ವರ ದೇವರ ಆಚಾರ್ಯ ಜ್ಞಾನರಾಶಿ ಪಂಡಿತರಿಗೆ ದಾನ ನೀಡದ ವಿಷಯವನ್ನು ದಾಖಲಿಸಿದೆ.

ಇವನು ಅಧಿಕಾರಕ್ಕೆ ಬಂದ ನಂತರ ಹಲವಾರು ಕಲಹಗಳು ನಡೆದವು ೧೧೭೫ ರಲ್ಲಿ ಪದಚ್ಯುತಿಗೊಂಡ ನಂತರ ಇವನ ಸಹೋದರ ಮಲ್ಲಿಕಾರ್ಜುನ (ಮೈಲುಗಿ), ಅಧಿಕಾರಕ್ಕೆ ಬಂದ.

## ಮಲ್ಲಿಕಾರ್ಜುನ (ಮೈಲುಗಿ) :

ಇವನ ೩ ಶಾಸನಗಳು ಸಿಕ್ಕಿವೆ ಅವುಗಳು ತೆನಿಹಳ್ಳಿಯ ಶಾಸನ ವಿಜಯಪುರದ ಮ್ಯೂಸಿಯಂನ ಶಾಸನ ಇಂಡಿ ತಾಲೂಕಿನ ರೂವಿಗಿಯ ಶಾಸನ.

## ಸಂಕಮನ :

ಇವನ ೫ ಶಾಸನಗಳು ಸಿಕ್ಕಿವೆ ಅವುಗಳು ೨ ಕಟಗೇರಿ ೧ಮಿಣಜಗಿ ೧ಮನಗೂಳಿ ೧ನಿಂಬಾಳ ತಾಮ್ರ ಶಾಸನ ಇವುಗಳು ಹಲವಾರು ದಾನ ದತ್ತಿಯನ್ನು ಕೊಟ್ಟ ಬಗ್ಗೆ ವಿವರಿಸುತ್ತವೆ.

## ಆಹಮಲ್ಲ :

ಇವನ ಆಳ್ವಿಕೆಯ ೨ ಶಾಸನಳು ಸಿಕ್ಕವೆ ತಾಳಿಕೋಟೆಯ ಸ್ವಯಂಭು ಸೋಮೇಶ್ವರ ದೇವರಿಗೆ ಹಗರಟಗೆಯ ೩೦೦ ಗ್ರಾಮಗಳಿಂದ ಒಂದೊಂದು ಹೊನ್ನನ್ನು ದಾನವಾಗಿ ನೀಡಿದ ವಿಷಯವನ್ನು ತಿಳಿಸುತ್ತದೆ.

**ಸಿಂಘಣ :**

ಈತನೇ ಕಲಚೂರಿಗಳ ಕೊನೆಯ ಅರಸ ಇವನು ನಾಲ್ಕನೆಯ ಸೋಮೇಶ್ವರನಿಂದ ಸೋತು ಮತ್ತೆ ಕಲ್ಯಾಣದ ಚಾಲುಕ್ಯರಿಗೆ ಅಧಿಕಾರ ನೀಡಿದ.

ಒಟ್ಟಿನಲ್ಲಿ ಹೇಳುವದಾದರೆ ಉತ್ತರ ಭಾರತದಿಂದ ಪರಶುರಾಮನಿಗೆ ಅಂಜಿ ಸಾಮಂತರಾಗಿ ಕರ್ನಾಟಕಕ್ಕೆ ಬಂದರು ಇಲ್ಲಿಯ ರಾಜನಿಗೆ ಹೆಣ್ಣು ಕೊಟ್ಟು ಬೆನ್ನು ಕೊಡದೆ ಅವರನ್ನೆ ಪದಚ್ಯುತಿಗೊಳಿಸಿ ಆಳ್ವಿಕೆಯನ್ನು ನಡೆಸಿದ ಅಲ್ಪ ಕಾಲದ ರಾಜಮನೆತನದವರು ಎನಿಸಿಕೊಂಡರು. ಮುಂದೆ ನಾಲ್ಕನೆಯ ಸೋಮೇಶ್ವರ ಮತ್ತೆ ದಾಳಿಮಾಡಿದಾಗ ಅಂಜಿ ಪಂಡರಾಪುರದ ಬಳಿಯ ಮಂಗಳವೇಡಕ್ಕೆ ಪಲಾಯನ ಮಾಡಿದರು. ಆಗ ಕಲಚೂರಿಗಳ ಸಾಮಂತರಾದ ಸೇವುಣರು ಹೊಯ್ಸಳರು ಇತರ ಸಾಮಂತರು ಸ್ವಾತಂತ್ರರಾಗಲು ಹವಣಿಸುತಿದ್ದರು.

**ಸೇವುಣರು :**

ಕಲ್ಯಾಣ ಚಾಲುಕ್ಯರ ನಾಲ್ಕನೆಯ ಸೋಮೇಶ್ವರ ಅಧಿಕಾರದಲ್ಲಿ ಸೇವುಣರು (ಯಾದವರು) ಹಾಗೂ ಹೊಯ್ಸಳರು ಪ್ರಬಲ ಸಾಮಂತರಾಗಿದ್ದರು ಸೇವುಣರ ಭೀಲ್ಮಣ ಚೈತುಗ ಸೇವುಣರಲ್ಲಿ ಇಮ್ಮಡಿ ಬಲ್ಲಾಳ ಹೊಯ್ಸಳರಲ್ಲಿ ಪ್ರಭಲವಾದ ರಾಜನಾಗಿದ್ದರು ಮುಂದೆ ಇವರು ಸ್ವತಂತ್ರ್ಯಕ್ಕಾಗಿ ಹವಣಿಸ ತೊಡಗಿದರು ಸೊರಟೂರಿನಲ್ಲಿ ಯುದ್ದ ಜರುಗಿತು ಆ ಯುದ್ದದಲ್ಲಿ ಪ್ರಭಲನಾದ ಹೊಯ್ಸಳರ ಇಮ್ಮಡಿ ಬಲ್ಲಾಳ ಸೇವುಣರ ಭೀಲ್ಮನನ್ನು ಸೋಲಿಸಿದ ಆದರೆ ಮುಂದೆ ಭೀಲ್ಮನ ಮೊಮ್ಮಗ ಇಮ್ಮಡಿ ಸಿಂಘಣನು ಸುಮಾರು ೧೨೦೦ ರಲ್ಲಿ ಇಮ್ಮಡಿಯ ಬಲ್ಲಾಳನನ್ನು ಸೋಲಿಸಿದ ದಕ್ಷಿಣಕ್ಕೆ ಅಟ್ಟಿಸಿದ. ಇಲ್ಲಿಯವರೆಗೆ ಒಂದೆ ರಾಜ್ಯವಾದ ಕಲ್ಯಾಣ ಚಾಲುಕ್ಯರ ಮನೆತನ ಎರಡು ಭಾಗವಾಗಿ ತುಂಗಭದ್ರ ನದಿ ಆಚೆಗೆ ಇರುವ ಹೊಯ್ಸಳರು ಈಚೆಗಿರುವ ದೇವಗಿರಿಯ ಸೇವುಣರು.

ಇವರ ಬಗ್ಗೆ ಸುಮಾರು ೫೦೦ ಶಾಸನಗಳು ಸಿಕ್ಕಿವೆ ಇವು ಕನ್ನಡ ಸಂಸ್ಕೃತ ಮತ್ತು ಮರಾಠಿ ಭಾಷೆಯಲ್ಲಿ ಇವೆ ಇವರ ಶಾಸನಗಳು ನಮ್ಮ ಜಿಲ್ಲೆಯಲ್ಲಿ ಸುಮಾರು ೭೫ ಕ್ಕೂ ಹೆಚ್ಚು ಶಾಸನಗಳು ಸಿಕ್ಕಿವೆ ಇವರದು ಗರುಡು ವಾಹನ

**ಐದನೆಯ ಭಿಲ್ಲಮ :**

ಇವನ ಆಳ್ವಿಕೆಗೆ ಸಂಬಂಧಪಟ್ಟ ೧೮ ಶಾಸನಗಳು ಸಿಕ್ಕಿವೆ ಕಲಕೇರಿಯ ಮಲ್ಲಯ್ಯನ ಗುಡಿಯ ಬಳಿ ಶಾಸನ, ಬೆಕಿನಾಳದ ಶಾಸನ, ನಿಂಬಾಳದ





ಶಂಕರಲಿಂಗ ಗುಡಿಯ ಮುಂದಿನ ಶಾಸನ, ಮುತ್ತಗಿಯ ಶಾಸನ ವೀರಾಪುರ ಶಾಸನ ಮದಬಾವಿಯ ಕಲ್ಲೇಶ್ವರ ದೇವಾಲಯದ ಬಳಿಯ ಶಾಸನ ಬೈರವಾಡಗಿಯ ಬಸವೇಶ್ವರ ಗುಡಿಯ ಬಳಿಯ ಶಾಸನ ಇವನು ಹಲವು ದಾನ ದತ್ತಿಯನ್ನು ಕೊಟ್ಟಿದ್ದನ್ನು ತಿಳಿಸುತ್ತವೆ ಅದರಂತೆ **ಹಿರೇ ಬೇವಿನೂರಿನಿಂದ ವರದಿಯಾದ ೧೧೯೦ ಶಾಸನ ಮಾಯಿದೇವ ಚಮೂಪನ ತರ್ದವಾಡಿಯನ್ನು ಆಳುತ್ತಿದ್ದಾಗ** ಅವನ ಮಡದಿ ಸಿರಿದೇವಿ ಬೇವಿನೂರಿನಲ್ಲಿ ಮಾವು, ನೇರಳೆ ಹುಣಸೆ ಮುಂತಾದ ಮರ ನೆಟ್ಟು ಅದರಿಂದ ಬಂದ ಉತ್ಪನ್ನವನ್ನು ದೇವರಿಗೆ ನೀಡಿದ ಬಗ್ಗೆ ತಿಳಿಸುತ್ತದೆ.

ಮುಂದೆ **ಹಿಪ್ಪಗಿಯ ಕಾಶಿಲಿಂಗ ಗುಡಿಯ ಮುಂದಿನ ಶಾಸನ ೧೧೯೨ ರಲ್ಲಿ ಮಹಾಮಂಡಳೇಶ್ವರ ಗೋಣರಸ ಹಾಗೂ ಇತರರು ತರ್ದವಾಡಿಯನ್ನು ಆಳುತ್ತಿದ್ದಾಗ** ಹಿಪ್ಪರಗೆಯ ಸ್ವಯಂಭು ಕಲಿದೇವರ ಅಂಗ ರಂಗಭೋಗಗಲಿಗೆಂದು ಇಂಗುಣಿಗೆಯನ್ನು ದಾನ ಬಿಟ್ಟ ಹಾಗೂ ಶಾಲೆಗೆ ೧೨ ಮತ್ತರ ಹೊಲವನ್ನೂ ಸೋಮರಸ ಹಾಗು ಚಾಮರಸರು ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ ಮುಂದೆ ಇವನ ಮರಣದ ನಂತರ ಇವನ ಮಗ ಚೈತುಗಿ ಅಧಿಕಾರಕ್ಕೆ ಬಂದ

**ಚೈತುಗಿ ೧೯೯೨-೧೨೦೦ :**

ಇವನ ಆಳ್ವಿಕೆಗೆ ಸಂಬಂಧಿಸಿದ ೯ ಶಾಸನಗಳು ಸಿಕ್ಕಿವೆ ೧೧೯೨ ರಲ್ಲಿ ಕಡಲೇವಾಡದಿಂದ ಮೊದಲ ಶಾಸನ ವರದಿಯಾಗಿದೆ ಮುಂದೆ ೧೧೯೪ ರ ಸಂಕದಿಂದ ವರದಿಯಾದ ಶಾಸನ ಸೊನ್ನಲಿಗೆಯ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರಿಗೆ ಸಂಕ ಗ್ರಾಮವನ್ನು ದಾನ ಬಿಟ್ಟ ಬಗ್ಗೆ ತಿಳಿಸುತ್ತದೆ ವಿಜಯಪುರದ ಆರ್ಕಿಲ್ಲಾದಲ್ಲಿರುವ ೧೧೯೬ ಶಾಸನ ಮಹಾ ಮಂಡಳೇಶ್ವರ ಸಂಕರಸ ದಂಡನಾಯಕ ಕರಣ ಕೇಸಿಮಯ್ಯ ಹಾಗೂ ಶಂಕರ ಚಮೂಪರು ತರ್ದವಾಡಿಯನ್ನು ಆಳುತ್ತಿದ್ದಾಗ ವಿಜಯಪುರ ನರಸಿಂಹ ದೇವರಿಗೆ ಸರ್ವನಮಸ್ಯದ ಗ್ರಾಮ ಹೊಸಳ್ಳಿ ಕಾಣಿಕೆ ಕೊಟ್ಟಿದ್ದನ್ನು ತಿಳಿಸುತ್ತದೆ. ಅದರಂತೆ ಇಂಡಿಯ ಶಾಸನ ದೇವಣಗಾವ ಕಲ್ಲಪ್ಪ ಗುಡಿ ಬಾಗೇವಾಡಿ ಶಾಸನ ಮನಗೂಳಿಯ ಶಾಸನ ಕೂಡಗಿಯ ೧೨೦೦ ಶಾಸನ ಸೋಮದೇವ ಹಾಗೂ ಮಾಯಿದೇವ ದಂಡನಾಯಕರು ಸೊನ್ನಲಿಗೆಯ ಕಪಿಲ ಸಿದ್ಧಮಲ್ಲಿಕಾರ್ಜುನನ ದೇವರಿಗೆ ಕೂಡಿಗೆ ಗ್ರಾಮವನ್ನು ದಾನ ನೀಡಿದ ವಿಷಯ ತಿಳಿಸುತ್ತದೆ. ಮುಂದೆ ಸಿಂಘಣ ಅಧಿಕಾರಕ್ಕೆ ಬಂದ.

**ಸಿಂಘಣ :**

ಸೇವುಣರಲ್ಲಿಯೇ ಅತಿ ಬಲಿಷ್ಠವಾದ ರಾಜನಾದ ಸಿಂಘಣನಿಗೆ ಸಂಬಂಧ ಪಟ್ಟ ೫೦ ಕ್ಕೂ ಹೆಚ್ಚು ಶಾಸನ ಸಿಕ್ಕಿವೆ. ಈತ ಹೊಯ್ಸಳರೊಂದಿಗೆ ಹೋರಾಡಿ ಅವರನ್ನು ತುಂಗಭದ್ರೆಯ ವರೆಗೆ ಅಟ್ಟಿದನು ಇಂಗಳೇಶ್ವರದ ೧೨೧೨ ರ ೧೨೧೫ ರ ಶಾಸನ ಅಗ್ಗಳ ಸೆಟ್ಟಿಯ ಮಗ ಶಾಂತಿ ಶೆಟ್ಟಿ ಮಾಘನಂದಿ ಮುನಿಭಟ್ಟಾರಕರು ಹಾಗೂ ಸತ್ಯಣ್ಣರು ಮರಣ ಹೊಂದಿದ್ದನ್ನು ದಾಖಲಿಸುತ್ತದೆ ಅಗ್ಗಳ ಸೆಟ್ಟಿ ಇಂಗಳೇಶ್ವರದವನು ಎಂದು ತಿಳಿಸುವ ಶಾಸನವಿದು.

**ಕೃಷ್ಣ :**

ಇವನ ಆಳ್ವಿಕೆಗೆ ಸಂಬಂಧಪಟ್ಟ ೧೨ ಶಾಸನಗಳು ಸಿಕ್ಕಿವೆ ಇಂಗಳೇಶ್ವರದ ಪಾರ್ಶ್ವನಾಥ ದೇಗುಲದ ಪೂಜಾವಿಧಿಗೆ ದಾನ ಬಿಟ್ಟಿದ್ದು ತಿಳಿಸುತ್ತದೆ.

**ಮಹಾದೇವ :**

ಇವನ ಆಳ್ವಿಕೆಗೆ ಸಂಬಂಧಪಟ್ಟ ೨ ಶಾಸನಗಳು ಮಾತ್ರ ನಮ್ಮಲ್ಲಿ ಸಿಕ್ಕಿವೆ ಇಂಗಳೇಶ್ವರದ ನಾರಾಯಣ ದೇವರ ಗುಡಿಯ ಬಳಿ ಇರುವ ೧೨೬೫ ರ ಶಾಸನ ಮಹಾದೇವನು ದೇವಗಿರಿಯಿಂದ ರಾಜ್ಯವಾಳುತ್ತಿದ್ದಾಗ ಜನಮೇಜಯ ಭೂಭುಜದತ್ತಿಯಾದ ಅಗ್ರಹಾರ **ಇಂಗಳೇಶ್ವರ ೧೦೦೦ ಮಹಾ ಜನರು ಚಾವುಂಡರಸನು ನಿರ್ಮಿಸಿದ ಗೋಪಿನಾಥ ದೇವರ ಸೇವೆಗೆಂದು ೩೨ ಗೇಣಿನ ಗಳೆಯಲ್ಲಿ ೭೩ ಮತ್ತರು ಹೊಲ ಅಂಗಡಿ ಹಾಗೂ ಕಲ್ಲು ಗಾಣಗಳನ್ನು ಸುಂಕಾಧಿಕಾರಿ ಬಸವರಸನು ಸಾಳವಾಡಿಗೆಯ ಪ್ರಭುಗಳಿಂದ ೧೬ ಮತ್ತರ ಹೊಲವನ್ನು ಖರೀದಿಸಿ ದಾನ ಬಿಟ್ಟ ವಿಷಯ ತಿಳಿಸುತ್ತದೆ**

**ರಾಮಚಂದ್ರ :**

ಈತನೇ ಸೇವುಣರ ಕೊನೆಯ ದೊರೆ.

**ಖಿಲ್ಜಿ ಸಂತತಿ :**

ತುರ್ಕಿ ಬುಡಕಟ್ಟಿಗೆ ಸೇರಿದ ಜಲಾಲುದ್ದೀನ್ ಅಫಘಾನಿಸ್ತಾನದ ಹೆಲ್ಮಂಡ್ ಕಣಿವೆ ನೆಲೆಸಿದ್ದು ಆ ಕಾಲದಲ್ಲಿ ಹೆಲ್ಮಂಡ್ ಕಣಿವೆಗೆ ಖಿಲ್ಜಿ ಪ್ರದೇಶವೆಂದು ಕರೆಯುತ್ತಿದ್ದು ಆ ಪ್ರದೇಶದಿಂದ ಬಂದ ಇವರಿಗೆ ಖಿಲ್ಜಿ ಸಂತತಿ ಎಂದು ಕರೆದರು. ಇವನ ಮೊದಲು ಗುಲಾಮರ ಸಂತತಿಯ ಕೈಬುಭಾದ ಕೈ ಕೆಳಗೆ





ಅಧಿಕಾರ ಮಾಡುತ್ತಿದ್ದರು ಕೈಬುಭಾದನಿಗೆ ಪಾರ್ಶ್ವವಾಯು ಹೊಡೆದಾಗ ಇವನನ್ನು ಕನ್ನಡಿಯ ಅರಮನೆಯಲ್ಲಿ ಕೊಂದು ಜಮುನಾ ನದಿಗೆ ಬಿಸಾಕಿ ಇವನ ಮಗ ಚಿಕ್ಕ ವಯಸ್ಸಿನ ಕಯೂಮಾರ್ ನನ್ನು ಅಧಿಕಾರಕ್ಕೆ ತಂದು ಆ ಹುಡುಗ ಅಧಿಕಾರಕ್ಕೆ ಬಂದ ೩ ತಿಂಗಳಲ್ಲಿ ಆ ಚಿಕ್ಕ ಹುಡುಗನನ್ನು ನೋಡದೆ ಕೊಂದು ಜಲಾಲುದ್ದೀನ್ ಖಿಲ್ಜಿ ೧೨೯೦ ರಲ್ಲಿ ಪಟ್ಟಾಭಿಷಕ್ತನಾದ ಆಗ ಅವನಿಗೆ ೭೦ ವರ್ಷ ಇವನು ಮುಂದೆ ಯುದ್ದಕ್ಕೆ ಅಷ್ಟೊಂದು ಮಹತ್ವಕೊಡಲಿಲ್ಲ.

ಮುಂದೆ ಜಲಾಲುದ್ದೀನನ ಅಳಿಯ ಅಲ್ಲಾವುದ್ದೀನ ಖಿಲ್ಜಿ ಮಾವನಾದ ಜಲಾಲುದ್ದೀನಗೆ ಹೇಳದೆ ಬೀಸ್ಲಾ ನಗರದ ಮೇಲೆ ದಾಳಿ ಮಾಡಿದ. ಅಲ್ಲಿ ಹಲವಾರು ಸಂಪತ್ತನ್ನು ಕೊಳ್ಳೆಹೊಡೆದು ಒಂದನ್ನು ಮಾತ್ರಕೊಟ್ಟನು. ದಕ್ಷಿಣ ಭಾರತದ ದೇವಗಿರಿಯಲ್ಲಿ ಅಪಾರವಾದ ಸಂಪತ್ತು ಇದೆ ಎಂದು ಹಲವರಿಂದ ಕೇಳಿದ ಇವನು ಜಲಾಲುದ್ದೀನಗೆ ಹೇಳದೆ ಕೇಳದೆ ದಕ್ಷಿಣಕ್ಕೆ ದಾಳಿ ಮಾಡಿದ ಪ್ರಥಮ ಮುಂಸ್ಲಿಮ ನಾಯಕನಾದನು. ದೇವಗಿರಿಯನ್ನು ಸೇವುಣರ ರಾಜ ರಾಮಚಂದ್ರ ಆಳ್ವಿಕೆಯನ್ನು ಮಾಡುತ್ತಿದ್ದ ಈ ರಾಮಚಂದ್ರ ತನ್ನ ಮುಖ್ಯ ಸೇನಿಯ ಮಗ ಸಿಂಘಣ ಹೊಯ್ಸಳ ಮೇಲೆ ಯುದ್ದ ಮಾಡಲು ಹೋಗಿದ್ದ. ಈ ಸಂದರ್ಭ ನೋಡಿ ಸಂಚು ರೂಪಿಸಿ ಬರುತ್ತಿದ್ದ ಅಲ್ಲಾವುದ್ದೀನನನ್ನು ನೋಡಿ ಸೇವುಣರು ಯಾರು ನೀವು ಎಂದಾಗ ನಾವು ತೆಲಂಗಾಣಕ್ಕೆ ಕೆಲಸಕ್ಕೆ ಹೊರಟ ಸೈನಿಕರು ಎಂದು ಹೇಳಿದರು ಆಗ ಸೇವುಣರು ಸುಮ್ಮನಾದರು ಆಗ ಏಕಾಏಕಿ ದಾಳಿ ಮಾಡಿ ರಾಮಚಂದ್ರನಿಗೆ ನಮ್ಮ ಹಿಂದೆ ಬಹಳ ಸೈನ್ಯವಿದೆ ಎಂದು ಅಂಜಿಸಿ. ಕಪ್ಪು ಕಾಣಿಕೆ ತಗೆದುಕೊಂಡು ಮರುಳಿ ಹೋಗುವಾಗ ಸಿಂಘಣ ಬಂದ ಆವಾಗ ತಂದೆಯ ಮಾತು ಕೇಳದೆ ಅಲ್ಲಾವುದ್ದೀನನ ಮೇಲೆ ದಾಳಿ ಮಾಡಲು ಹೊರಟ ನಸ್ರುತ್ ಖಾನನ ಒಂದು ಸಾವಿರ ಅಶ್ವದಳ ಹಿಂದೆ ಇದ್ದದನು ತಿಳಿಯದ ಸಿಂಘಣ ಅಲ್ಲಾವುದ್ದೀನನಮೇಲೆ ದಾಳಿ ಮಾಡಿದಾಗ ಅಲ್ಲಾವುದ್ದೀನ್ ಸೋತನು ಆದರೆ ನಸ್ರುತ್‌ಖಾನನ ಸಾವಿರ ಅಶ್ವದಳ ಬಂದಾಗ ದೇಹಲಿಯ ಸೈನ್ಯವೆ ಬಂದಿದೆ ಎಂದು ಸಿಂಘಣ ಸೈನ್ಯ ಅಂಜಿತು ಆಗ ಸಂದಾನಕ್ಕೆ ಬಂದರು ಸೇವುಣರು ಅದಕ್ಕಿಂತ ಕಠಿಣ ಒಪಂದವನ್ನು ಮಾಡಿಕೊಂಡು ಕಪ್ಪ ಕೊಡಲು ಒಪ್ಪಿದರು. ಮುಂದೆ ರಾಮಚಂದ್ರನು ೧೩೦೫–೬ ರಲ್ಲಿ ಕಪ್ಪನ್ನು ಒಪ್ಪಿಸಲಿಲ್ಲ. ಸಿಟ್ಟಿಗೆದ್ದ ಅಲ್ಲಾವುದ್ದೀನ ದಂಡನಾಯಕನಾದ ಮಲ್ಲಿಕಾಫರ ರಾಮಚಂದ್ರನ ರಾಜ್ಯ ಆಕ್ರಮಿಸುವಂತೆ ದಾಳಿ ಮಾಡಿ ರಾಮಚಂದ್ರನನ್ನು ಸೋಲಿಸಿ ಅಗಾಧ ಸಂಪತ್ತನ್ನು ಕೊಳ್ಳೆ ಹೊಡೆದು ರಾಮಚಂದ್ರ ಹಾಗೂ ಅವನ ಕುಟುಂಬವನ್ನು ದೆಹಲಿಗೆ ಕರೆತಂದ ಆಗ

ಅಲ್ಲಾವುದ್ದೀನನು ರಾಮಚಂದ್ರನನ್ನು ಶಿಕ್ಷಿಸದೆ ಆರು ತಿಂಗಳು ಇಟ್ಟುಕೊಂಡು ನವ್ಸಾರಿ ಪ್ರಾಂತ್ಯವನ್ನು ನೀಡಿದ ಇದರಿಂದ ಸಂತಸಗೊಂಡ ರಾಮಚಂದ್ರ ಅಲ್ಲಾವುದ್ದೀನಗೆ ಕಪ್ಪು ಕಾಣಿಕೆ ನೀಡುತ್ತಾ ದಕ್ಷಿಣದ ದಂಡಯಾತ್ರೆಗೆ ಸಹಾಯಮಾಡ ತೊಡಗಿದ.

**ವಾರಂಗಲ್ಲಿನ ದಾಳಿ :** ಒಂದು ತುತ್ತು ರೊಟ್ಟಿಗೆ ನಾಯಿ ಹೇಗೆ ಬಾಲ ಅಲ್ಲಾಡಿಸುತ್ತಾ ಮಾಲಿಕನಿಗೆ ಋಣವಾಗಿರುತ್ತದೆಯೋ ಹಾಗೇ ರಾಮಚಂದ್ರ ಕೂಡಾ ಅಲ್ಲಾವುದ್ದೀನನಿಗೆ ಅಡಿಯಾಳಾದ. ರಾಮಚಂದ್ರನನ್ನು ಶಿಕ್ಷಿಸದೇ ಒಂದು ಪ್ರಾಂತ್ಯ ನೀಡಿದ್ದಕ್ಕೆ ಅವನ ಋಣವನ್ನು ತೀರಿಸಲು ತಮ್ಮ ಎಡ ಬಲದ ರಾಜನಿಗೆ ಸೋಲಿಸಲು ಸಹಾಯ ಮಾಡಿದ್ದು ದಕ್ಷಿಣ ಭಾರತದ ಅವನತಿಗೆ ಕಾರಣವಾಯಿತು.

ವಾರಂಗಲ್ಲಿನ ಮೇಲೆ ೧೩೦೩ ರಲ್ಲಿ ದಾಳಿ ಮಾಡಿ ಸೋತ ನಂತರ , ದೇವಗಿರಿಯ ಮೇಲೆ ದಾಳಿ ಮಾಡಿ ಗೆದ್ದು ರಾಮಚಂದ್ರನನ್ನು ಆರು ತಿಂಗಳು ತನ್ನ ಬಳಿ ಇರಿಸಿಕೊಂಡು ದಕ್ಷಿಣದ ರಾಜರ ಅಂತರಂಗವನ್ನು ತಿಳಿದುಕೊಂಡ ಮೇಲೆ ಅಲ್ಲಾವುದ್ದೀನ ರಾಮಚಂದ್ರನಿಗೆ ನಾವು ವಾರಂಗಲ್ಲಿನ ಮೇಲೆ ದಾಳಿ ಮಾಡುತ್ತೇವೆ ಸಹಾಯ ಮಾಡಿ ಎಂದು ಗರ್ವದಿಂದ ಕೇಳಿದ ಅಲ್ಲಾವುದ್ದೀನ ಮಾತು ವೇದ ವ್ಯಾಕ್ಯವೆಂದು ತಿಳಿದು ಸರಿ ಎಂದು ರಾಮಚಂದ್ರ ಒಪ್ಪಿಕೊಂಡ ಆಗ ಅಲ್ಲಾವುದ್ದೀನ ೧೩೦೯ ರಲ್ಲಿ ಮಲಿಕ್ ಕಾಪೂರ ನೇತೃತ್ವದಲ್ಲಿ ಸೈನ್ಯ ಕಳುಹಿಸಿದ, ಈ ಸೈನ್ಯಕ್ಕೆ ಅಗತ್ಯವಾದ ಎಲ್ಲವನ್ನು ನೀಡಿದ ರಾಮಚಂದ್ರ. ಬಹಳ ಸೈನ್ಯದೊಂದಿಗೆ ಬಂದಿದ್ದ ಮಲಿಕಾಪೂರನ ಸೋಲಿಸಲಾಗದೆ ಪ್ರತಾಪರುದ್ರನು ಶಾಂತಿ ಸಂದಾನ ಮಾಡಿಕೊಂಡು ಕಪ್ಪು ಕಾಣಿಕೆ ನೀಡಿದ ಅದರ ಜೊತೆಗೆ ಅಪಾರ ಸಂಪತ್ತನ್ನು ಹೊರಲು ಅವರ ಕುದುರೆ ಆನೆಗಳು ಅಲ್ಲದೆ ೧೦೦ ಆನೆ ೭೦೦೦ ಕುದುರೆಗಳ್ಳು ಮತ್ತು **ವಿಶ್ವ ವಿಖ್ಯಾತ ಕೊಹಿನೂರ ವಜ್ರವನ್ನು ನೀಡಿದ** ಇದು ಅಲ್ಲದೆ ನೆರೆಯ ದಾಳಿಗಳಾದರೆ ಸಹಾಯ ಮಾಡುತ್ತೇನೆ ಎಂದು ಹೇಳಿದ ಮುಂದೆ ಇವರು ಹೊಯ್ಸಳರ ಮೇಲೆ ದಾಳಿ ಮಾಡಿದರು

## ಹೊಯ್ಸಳರ ಮೇಲೆ ದಾಳಿ :

ಶತ್ರುಗಳ ಶತ್ರು ಮಿತ್ರ ಎನ್ನುವಂತೆ ನಮ್ಮ ಮೇಲೆ ದಾಳಿಯಾದಂತೆ ಅವರ ಮೇಲು ದಾಳಿಯಾಗಲಿ ಎಂದು ಕುಳಿತುಕೊಳ್ಳುವ ಕಾಲವದು ಅದರಂತೆ ಮತ್ತೇ ಮಲಿಕ್‌ಕಾಪರ ಮತ್ತು ಖ್ವಾಜಾಜಿ ಎಂಬ ಇಬ್ಬರು ಸೇನಾಧೀಕಾರಿಗಳು ಸೈನ್ಯದೊಂದಿಗೆ ೧೩೧೧ ರಲ್ಲಿ ದೇವಗಿರಿಗೆ ಬಂದು ರಾಮಚಂದ್ರನಿಂದ ಹಾಗೂ





ಪ್ರತಾಪರುದ್ರನಿಂದ ಹಲವಾರು ಸಲಕರಣೆ ತಗೆದುಕೊಂಡು ಹೋಗಿ ಮೂರನೇಯ ವೀರ ಬಲ್ಲಾಳನ ಮೇಲೆ ದಾಳಿ ಮಾಡಿದರು ಸೋತ ಮೂರನೇಯ ಬಲ್ಲಾಳ ಸಾಮಂತನಾಗಿರಲು ಒಪ್ಪಿ ಕಪ್ಪು ಕಾಣಿಕೆ ನೀಡಿ ಪಾಂಡ್ಯರ ರಾಜ್ಯವನ್ನು ಆಕ್ರಮಿಸುವಾಗ ಸಹಾಯ ಮಾಡುವದಾಗಿ ತಿಳಿಸಿದ. ಅದರಂತೆ ಸುಮಾರು ೧೨ ದಿನಗಳು ದ್ವಾರಸಮುದ್ರದಲ್ಲಿ ಕಾಲಕಳೆಯುತ್ತಿದ್ದಾಗ ಇತ್ತ ಪಾಂಡ್ಯ ರಾಜದ ರಾಜಕುಮಾರರು ಸಿಂಹಾಸನಕ್ಕಾಗಿ ಕಾದಾಡ ಹತ್ತಿದರು. ಇದನ್ನೇ ನೋಡುತ್ತಾ ಕುಳಿತಿದ್ದ ಮಲಿಕಾಪರ.

## ಪಾಂಡ್ಯ ರಾಜ್ಯದ ಮೇಲೆ ದಾಳಿ :

ಅಧಿಕಾರದ ಪಿತ್ತ ತೆಲೆಗೆ ಹತ್ತಿ ಪಾಂಡ್ಯದ ರಾಜಕುಮಾರರಾದ ಸುಂದರ ಪಾಂಡ್ಯ ಮತ್ತು ವೀರ ಪಾಂಡ್ಯ ಜಗಳವಾಡಹತ್ತಿದ್ದರು ತಂದೆಯಾದ ಕುಲಶೇಖರ ವೀರಪಾಂಡ್ಯ ಅಧಿಕಾರ ಮಾಡಲಿ ಎಂದಾಗ ಸುಂದರ ಪಾಂಡ್ಯ ತಂದೆಯನ್ನು ಕೊಂದು ಅದಿಕಾರಕ್ಕೆ ಬಂದ ಆಗ ವೀರ ಪಾಂಡ್ಯ ಮಲಿಕಾಫರನ ಬಳಿ ಬಂದು ಸಹಾಯ ಕೇಳಿದ ದೊಡ್ಡ ಸೈನ್ಯದೊಂದಿಗೆ ಸುಂದರ ಪಾಂಡ್ಯನ ಮೇಲೆ ದಾಳಿಗಿಳಿದ ಆದರೆ ಸುಂದರ ಪಾಂಡ್ಯ ತಪ್ಪಿಸಿಕೊಂಡು ಎಷ್ಟೇ ಹುಡುಕಿದರು ಸಿಗಲಿಲ್ಲ ನಂತರ ನಗರವನ್ನು ಸೂರೆ ಮಾಡಿದರು

## ದೇವಗಿರಿಯ ಮೇಲೆ ಮತ್ತೆ ದಂಡಯಾತ್ರೆ :

೧೩೧೨ ರಲ್ಲಿ ರಾಮಚಂದ್ರ ಮರಣ ಹೊಂದಿದ ನಂತರ ಸಿಂಘಣ ಅಧಿಕಾರ ವಹಿಸಿಕೊಂಡ ಮೊದಲಿನಿಂದಲೂ ಖಿಲ್ಜಿಗಳು ತೋರಿದ ನೀಚ ಬುದ್ಧಿಯಿಂದ ಕೋಪಗೊಂಡ ಇವನು ಕಪ್ಪಕೊಡುವದನ್ನು ನಿಲ್ಲಿಸಿದ ಇದರಿಂದ ಕೋಪಗೊಂಡ ಮಲ್ಲಿಕಾಪರ್ ೧೩೧೩ ರಲ್ಲಿ ದೊಡ್ಡ ಸೈನ್ಯ ತಂದು ಸಿಂಘಣ(ಶಂಕರದೇವ) ನೊಂದಿಗೆ ಯುದ್ದಮಾಡಿ ಗೆದ್ದು ಸಿಂಘಣನನ್ನು ಇಲ್ಲಿ ಕೊಂದರು.

ಆಗ ಇಡೀ ದಕ್ಷಿಣ ಭಾರತದ ಹಿಂದೂ ದೊರೆಗಳ ಆಳ್ವಿಕೆ ನಸಿಸಿ ಮುಸ್ಲಿಂಮರ ಆಡಳಿತಕ್ಕೆ ಒಳಪಟ್ಟಿತು.

ಮುಂದೆ ಅಧಿಕಾರದ ಆಸೆಯಿಂದ ಇವರ ಇವರಲ್ಲಿಯೇ ಕಲಹಗಳು ನಡೆದವು ಮಲ್ಲಿಕಾಪರ್ ಹೇಳಿದಂತೆ ಕೇಳುತ್ತಿದ್ದ ಅಲ್ಲಾವುದ್ದೀನ ಸಮರ್ಥ ಅಧಿಕಾರಿಗಳನ್ನು ತಗೆದು ದೂರದ ನಗರಗಳಿಗೆ ವರ್ಗಾಯಿಸಿದ. ಇತ್ತ ಇವನ ಹೆಂಡರು ಮಕ್ಕಳು ಸುಖಭೋಗ ಅನುಭವಿಸುತ್ತಾ ಅಲ್ಲಾವುದ್ದೀನ ಕಡೆ

ನೋಡಲೇ ಇಲ್ಲ ಹೆಂಡತಿಯಾದ ಮಲಿಕ ಐ ಜಹಾನ್ ಮಕ್ಕಳು ಹಾಗೂ ಸಹೋದರ ಅಲ್ಪಾಖಾನ ಕೂಡಿಕೊಂಡು ಮಲ್ಲಿಕಾಪರ ಶಕ್ತಿ ಕುಂದಿಸಬೇಕು ಅಂದುಕೊಂಡರು ಮುಂದೆ ಅಲ್ಲಾವುದ್ದೀನನ ಆರೋಗ್ಯದಲ್ಲಿ ಏರುಪೇರಾದಾಗ ಹೆಂಡರು ಮಕ್ಕಳು ಸರಿಯಾಗಿ ನೋಡದಿದ್ದಾಗ ಮಲ್ಲಿಕಾಪರನನ್ನು ಕರೆಸಿಕೊಂಡ ಆಗ ಅಧಿಕಾರದ ಆಸೆಗೆ ಬಿದ್ದ ಮಲ್ಲಿಕಾಪರ್ ನಿಮ್ಮ ಹೆಂಡರು ಹಾಗು ಅಳಿಯ ನಿಮ್ಮನ್ನು ಕೊಲ್ಲಲು ನೋಡುತ್ತಿದ್ದಾರೆ ಎಂದಾಗ ಅಲ್ಲಾವುದ್ದೀನ ಅಳಿಯನನ್ನು ಕೊಲ್ಲಿಸಿದ ಹೆಂಡರನ್ನು ಸೆರೆಮನೆಯಲ್ಲಿ ಇಟ್ಟ. ಅಲ್ಲಾವುದ್ದೀನನ ರೋಗ ಉಲ್ಬಣಿಸಿದಾಗ ಮಲ್ಲಿಕಾಪರನು ವಿಷ ಹಾಕಿ ಕೊಂದ ಎಂದು ತಿಳಿದು ಬರುತ್ತದೆ ಅಲ್ಲಾವುದ್ದೀನನ ಮರಣದ ನಂತರ ಸಿಂಹಾಸನಕ್ಕಾಗಿ ೩೫ ದಿನದಲ್ಲಿ ಅಲ್ಲಾವುದ್ದೀನನ ಮಕ್ಕಳನ್ನು ಕಣ್ಣು ಕೀಳಿಸಿದ ಪತ್ನಿಯನ್ನು ಸೆರೆಮನೆಗೆ ಸೇರಿಸಿದ ಹೀಗೆ ಹತ್ತು ಹಲವು ಘೋರ ಕೃತ್ಯವನ್ನು ನಡೆಸಿದ ಇವನ ಕೃತ್ಯಕ್ಕೆ ಬೇಸತ್ತು ಜನ ಇವನನ್ನು ಹೊಡೆದು ಕೊಂದರು.

ಹೀಗೆ ಒಟ್ಟಿನಲ್ಲಿ ಹೇಳುವದಾದರೆ ಅಧಿಕಾರಕ್ಕಾಗಿ ಖಿಲ್ಜಿ ಮನೆತನ ಬರಿ ಸುಳ್ಳು, ಮೋಸ, ವಂಚನೆ ನಂಬಿದವರ,ರಕ್ತವನ್ನು ಹರಿಸಿ ಅಧಿಕಾರ ಮಾಡಿದರು. ಮುಂದೆ ನಮ್ಮ ವಿಜಯಪುರ ಭಾಗವು ಮಹ್ಮದ ಬಿನ್ ತುಘಲಕ್‌ನ ಸಾಮ್ರಾಜ್ಯಕ್ಕೆ ಸೇರಿತು ಮಹಮ್ಮದ ಬಿನ್ ತುಘಲಕ್‌ನನ್ನು **ದೇವಗಿರಿಯ ಹೆಸರನ್ನು ತಗೆದು ದೌಲತಾಬಾದ ಎಂದು ನಾಮಕರಣ ಮಾಡಿದ**. ಇವನ ಆಳ್ವಿಕೆಯಲ್ಲಿ ದೆಹಲಿಯಿಂದ ದೌಲತಾಬಾದ್ ಮತ್ತೆ ದೌಲತಾಬಾದ್ ದಿಂದ ದೆಹಲಿಗೆ ರಾಜದಾನಿಯನ್ನು ವರ್ಗಾಯಿಸಿದ್ದು ಎಲ್ಲರಿಗೂ ತಿಳಿದ ವಿಚಾರ. ಅದರಂತೆ ತನ್ನ ಆಡಳಿತಕ್ಕೆ ದಖ್ಖನ್ನಿನಲ್ಲಿ ಅಮೀರರನ್ನು ನೇಮಿಸಿದ. ಇವರನ್ನು ಸರಿಯಾಗಿ ನಡೆಸಿಕೊಳ್ಳದ ಕಾರಣ ಇವರು ಬಂಡೆದ್ದು ಮುಂದೆ ಹಸನ್ ಗಂಗು ಅಧಿಕಾರಕ್ಕೆ ಬಂದು ಬಹುಮನಿ ಸಾಮ್ರಾಜ್ಯವನ್ನು ಸ್ಥಾಪಿಸಿದ, ಇಲ್ಲಿಯ ವರೆಗೆ ನಮ್ಮ ಊರಿನ ರಾಜರ ಇತಿಹಾಸ ನಾವು ನೋಡಿದ್ದೇವೆ ಮುಂದೆ ಇಂಗಳೇಶ್ವರದ ಇತಿಹಾಸ ರಾಜರ ಇತಿಹಾಸದಲ್ಲಿ ಬರುವದು ಬಹಳ ಕಡಿಮೆ.

## ಬಹುಮನಿ ಸಾಮ್ರಾಜ್ಯ ೧೩೪೭–೧೫೩೮ :

ಹಸನ್ ಗಂಗೂನ, ಜಾಪರ್ ಖಾನ, ಅಲ್ಲಾವುದ್ದೀನ್ ಬಹಮನ್ ಷಾ ಎಂಬ ಹೆಸರಿನೊಂದಿಗೆ ಆಡಳಿತದಲ್ಲಿ ಗುಲಬರ್ಗಾ ಪ್ರಧಾನ ನಗರವಾಗಿತ್ತು ಇದರಲ್ಲಿ ವಿಜಯಪುರವು ಸಹ ಇತ್ತು. ವಿಜಯಪುರದ ಭಾಗವನ್ನು ತನ್ನ ಮಾವನಾದ ಮಾಲಿಕ್ ಸೈಪುದ್ದೀನ್ ಘೋರಿಗೆ ವಹಿಸಿಕೊಟ್ಟಿದ್ದ. ಮುಂದೆ





ಒಂದನೆ ಬಹಮನ್ ಷಾ, ಒಂದನೇ ಅಹ್ಮದ ವಲಿ. ಇಮ್ಮಡಿ ಅಲ್ಲಾವುದ್ದೀನ್ ಹುಮಾಯೂನ್ ಇಮ್ಮಡಿ ಬಹಮನ ಷಾ ನಂತರದಲ್ಲಿ ಬಂದ ಶಿಹಾಬುದ್ದೀನ್ ಮಹ್ಮದ್ ಬಹಮನ್ ಷಾ ಅಧಿಕಾರಕ್ಕೆ ಬಂದರು ಹೆಸರಿಗಷ್ಟೆ ಸುಲ್ತಾನನಾಗಿದ್ದ.ಇವನ ಆಳ್ವಿಕೆಯಲ್ಲಿ ವಿಜಾಪುರ ಆದಿಲ್ ಷಾಹಿಗಳು ಅಹಮದ ನಗರದ ನಿಜಾಮ ಷಾಹಿಗಳು ಸ್ವತಂತ್ರರಾದರು.

## ಬಿಜಾಪುರದ ಆದಿಲ್ ಷಾಹಿಗಳು ೧೪೮೯–೧೬೮೬ :

ಟರ್ಕಿ ಮೂಲದ ಯುಸೂಫ್ ಆದಿಲ್ ಖಾನನು ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಿದ ನಂತರ ಇಸ್ಮಾಯಿಲ್ ಆದಿಲ್ ಖಾನ್ ಅಧಿಕಾರಕ್ಕೆ ಬಂದ ಇವನ ನಂತರ ಅಧಿಕಾರಕ್ಕೆ ಬಂದ ಇವನು ಹೆಚ್ಚು ಕಾಲ ಅಧಿಕಾರದಲ್ಲಿ ಇವರಲಿಲ್ಲ ಇವನ ನಂತರ ಒಂದನೆ ಇಬ್ರಾಹಿಮ್ ಆದಿಲ್ ಷಾ ೧೫೩೦–೪೨ ಅಧಿಕಾರ ನಡೆಸಿದ ನಂತರ ಒಂದನೆಯ ಅಲಿ ಆದಿಲ್ ಷಾ, ಇಮ್ಮಡಿ ಇಬ್ರಾಹಿಮ ಆದಿಲ್ ಷಾ.

- ೧೪೮೯ ಯೂಸುಪ್ ಆದಿಲ ಖಾನ್ ವಿಜಯಪುರ ಪ್ರಾಂತ್ಯವನ್ನು ಸ್ವತಂತ್ರ್ಯರಾಜ್ಯವೆಂದು ಘೋಷಿಸಿದನು.
- ೧೬೮೬ ರಲ್ಲಿ ಔರಂಗಜೇಬನು ವಿಜಯಪುರವನ್ನು ಗೆದ್ದುಕೊಂಡನು
- ೧೭೨೩ ರವರೆಗೆ ಮೊಘಲ ಆಧಿಪತ್ಯದಲ್ಲಿತ್ತು
- ೧೭೨೪ ರಿಂದ ಹೈದರಾಬಾದ ನಿಜಾಮರ ಆಳ್ವಿಕೆಗೆ ಒಳಪಟ್ಟಿತು
- ೧೭೬೦ ರಲ್ಲಿ ಮರಾಠರು ಆಳ್ವಿಕೆ ನಡೆಸಿದರು ದಕ್ಷಿಣ ಭಾಗವನ್ನು ೧೭೧೭ ರಲ್ಲಿ ೧೭೮೨ ರಲ್ಲಿ ಟಿಪ್ಪು ಹಾಗೂ ಹೈದರಲಿಯ ವಶದಲ್ಲಿತ್ತು.

೧೮೧೭ ರಲ್ಲಿ ಇಂಗ್ಲೀಷರಿಗೂ ಮತ್ತು ಪೇಶ್ವೆಗಳಿಗೆ ಯುದ್ದವಾಗಿ ೧೮೧೭ರಲ್ಲಿ ಬ್ರಿಟೀಷರ ವಶವಾಯಿತು ವಿಜಯಪುರ ತಾಲೂಕನ್ನು ಮಹಾರಾಷ್ಟ್ರ ಸಾತಾರ ರಾಜನಿಗೆ ಇಂಡಿ ಮುದ್ದೇಬಿಹಾಳ ತಾಲೂಕನ್ನು ಧಾರವಾಡ ಕಲೆಕ್ಟ್ರರೇಟ್ ಗೆ ಒಳಪಡಿಸಲಾಯಿತು.



# ಆಧುನಿಕ ಕಾಲದಲ್ಲಿ ಇಂಗಳೇಶ್ವರ

- ೧೮೩೮ ರಲ್ಲಿ ಸೋಲ್ಲಾಪುರಕ್ಕೆ ಸೇರಿಸಲಾಯಿತು ಮುಂದೆ ಇವುಗಳನ್ನು ಪುನರ್ವಿಂಗಡಿಸಿ ಮುಂದೆ ಇಂಡಿ ಮುದ್ದೇಬಿಹಾಳ ತಾಲೂಕನ್ನು ಒಡೆದು ಹಿಪ್ಪರಗಿ ಮತ್ತು ಮನಗೂಳಿ ತಾಲೂಕನ್ನಾಗಿ ಮಾಡಿದರು.
- ೧೮೪೮ ಮುಂದೆ ಸಾತಾರ ಮತ್ತು ವಿಜಾಪುರವನ್ನು ಮುಂಬಯಿ ಪ್ರಾಂತ್ಯಕ್ಕೆ ಸೇರಿಸಲಾಯಿತು.
- ಮುಂದೆ ಕಲಾದಗಿ ಜಿಲ್ಲೆಯಲ್ಲಿ ವಿಜಯಪುರ ಮತ್ತು ಬಾಗಲಕೋಟಿಯನ್ನು ಸೇರಿಸಲಾಯಿತು.
- ೧೮೬೨ ರಲ್ಲಿ ವಿಜಯಪುರವನ್ನು ಸೋಲ್ಲಾಪುರಕ್ಕೆ ಸೇರಿಸಲಾಯಿತು.
- ೧೮೭೩ ರಲ್ಲಿ ನಮ್ಮ ಇಂಗಳೇಶ್ವರದಲ್ಲಿ ಪ್ರಾಥಮಿಕ ಶಾಲೆಯನ್ನು ತೆರೆಯಲಾಯಿತು.
- ೧೮೮೫ ರಲ್ಲಿ ವಿಜಯಪುರವನ್ನು ಜಿಲ್ಲಾಡಳಿತ ಪ್ರದೇಶವಾಗಿ ಮಾಡಲಾಯಿತು.
- ೧೯೩೫ ರಲ್ಲಿ ನಮ್ಮ ಊರಿನಲ್ಲಿ ಹೆಣ್ಣು ಮಕ್ಕಳ ಶಾಲೆಯನ್ನು ತೆರೆಯಲಾಯಿತು.
- ೧೯೩೯ ರಿಂದ ಸ್ವಾತಂತ್ರ್ಯ ಹೋರಾಟದ ಕಿಚ್ಚು ಜಾಸ್ತಿಯಾಗಿ ನಮ್ಮ ಜಿಲ್ಲೆಯಲ್ಲಿ ಹಲವಾರು ಜನ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಇಂಗಳೇಶ್ವರದ ಭಗತ್ ಸಿಂಗ್ ಎಂದೇ ಖ್ಯಾತರಾದ ದಿ॥ಶ್ರೀ ಯಮನಪ್ಪ ಅವಟಿಯವರು ದಿ॥ಶ್ರೀ ದರೇಪ್ಪ ಹೆಗಡಿಹಾಳ ದಿ॥ಶ್ರೀ ಶಿವಪ್ಪ ನಾ ವಡ್ಡರ, ಈರಪ್ಪ ಕ ಅವಟಿ, ವಿರುಪಾಕ್ಷಪ್ಪ ಮುದ್ದೇಬಿಹಾಳ ಅವರು ಹೋರಾಡಿದ್ದು ಈ ಅವಧಿಯಲ್ಲಿಯೇ.
- ೧೯೪೧ ರಲ್ಲಿ ಪಂಚಾಯಿತಿ ಪ್ರಾರಂಭವಾಯಿತು.
- ೧೯೪೪ ಜೇಷ್ಠ ಶುದ್ಧ ಅಷ್ಟಮಿಯಂದು ಸಿದ್ಧಲಿಂಗ ಶಿವಯೋಗಿಗಳು ಶಿವಯೋಗ ಸಮಾಧಿ (ಲಿಂಗದಲ್ಲಿ ಆಗಿದ್ದು).





- ೨೫-೦೬-೧೯೪೬ ರಲ್ಲಿ ಸೊಸೈಟಿ ಪ್ರಾರಂಭವಾಯಿತು.
- ೧೯೫೬ರಲ್ಲಿ ಆಗಿನ ಮೈಸೂರು ರಾಜ್ಯಕ್ಕೆ ನಮ್ಮ ವಿಜಯಪುರವನ್ನು ಸೇರಿಸಲಾಯಿತು.
- ೧೯೬೨ ರಲ್ಲಿ ಫ್ರೌಢ ಶಾಲೆ ಪ್ರಾರಂಭವಾಯಿತು.
- ೧೯೬೭ ರಲ್ಲಿ ಬಸವಣ್ಣನವರ ಅಷ್ಟ ಶತಮಾನೋತ್ಸವ ಮಾಡಲಾಯಿತು.
- ೧೯೬೮ ರಲ್ಲಿ ಹಿರೇಮಠದಲ್ಲಿ ೧೦೮ ಮಹಾ ಮಂಟಪ ಪೂಜೆ ಹಮ್ಮಿಕೊಳ್ಳಲಾಯಿತು.
- ೧೯೭೩ ರಲ್ಲಿ ಬಸವೇಶ್ವರ ವಚನ ಶಿಲಾ ಮಂಟಪ ಅಡಿಗಲ್ಲು.
- ೨೭-೦೪-೧೯೯೦ ರಂದು ರೇವಣಸಿದ್ಧೇಶ್ವರರ ನೂತನ ದೇವಾಲಯ ನಿರ್ಮಾಣವಾಯಿತು.
- ೧೯೯೦ ರಲ್ಲಿ ಲಾಲಸಾಹೇಬ ಜಂಬಗಿಯರ ದಪ್ನ್ (ಮರಣ).
- ೧೯೯೯ ರಲ್ಲಿ ಕಾರ್ಗಿಲ್ ಯುದ್ದದಲ್ಲಿ ಮಡಿದವರಿಗೆ ನಿಧಿ ಸಂಗ್ರಹಿಸಿಕೊಡಲಾಯಿತು.
- ಬಸವಣ್ಣನವರಿಗೆ ಅವಮಾನ ಮಾಡಿದ್ದರಿಂದ ದಿ॥ ರಾಮು ಕಲ್ಲೂರ ಇವರ ಮುಂದಾಳತ್ವದಲ್ಲಿ ಇಂಗಳೇಶ್ವರದಲ್ಲಿ ದೊಡ್ಡ ಮಟ್ಟದ ಹೋರಾಟ ಮಾಡಿದರು.
- ೦೮-೦೯-೨೦೦೧ ರಲ್ಲಿ ಭೀರೇಶ್ವರ ನಗರ ಪ್ರಾಥಮಿಕ ಶಾಲೆ ಪ್ರಾರಂಭವಾಯಿತು.
- ೧೯-೧೨-೨೦೦೨ ರಂದು ಅಗಸಿಯ ಮೇಲೆ ರೇಣುಕಾಚಾರ್ಯ, ಬಸವಣ್ಣ, ಚನ್ನಬಸವಣ್ಣನವರ ಮೂರ್ತಿ ಸ್ಥಾಪಿಸಲಾಯಿತು.
- ೨೮-೦೯-೨೦೦೪ ರಂದು ಸೊಸೈಟಿಯ ವಾಣಿಜ್ಯ ಸಂಕೀರ್ಣ ಮಳಿಗೆ ಉದ್ಘಾಟನೆ ಮಾಡಲಾಯಿತು.
- ೨೦೦೮ ರಲ್ಲಿ ಕರ್ನಾಟಕ ಸರಕಾರ ಮಾದಲಾಂಬಿಕೆ ಸ್ಮಾರಕ ಭವನ ನಿರ್ಮಾಣಮಾಡಲು ಪ್ರಾರಂಭ ಮಾಡಿಲಾಯಿತು.
- ೨೦೧೯ ರಲ್ಲಿ ನಿಂಬೆವ್ವ ಕೆಂಚಪ್ಪ ಗುಬ್ಬಾ ಇವರಿಗೆ ಜಾನಪದ ಪ್ರಶಸ್ತಿ ನೀಡಲಾಯಿತು.

- ೨೩-೦೬-೨೦೧೯ ರಂದು ರಾಷ್ಟ್ರ ಧರ್ಮವೇದಿಕೆಯಿಂದ ರೇವಣಸಿದ್ದೇಶ್ವರರ ಉದ್ಯಾನ ವನಕ್ಕೆ ಚಾಲನೆ ಸಿಕ್ಕಿತು.
- ೧೯-೧೧-೨೦೨೦ ರಂದು ಇಂಗಳೇಶ್ವರದ ರೇವಣಸಿದ್ಧೇಶ್ವರರ ಮಂಗಲ ಮಂಟಪ ಉದ್ಘಾಟನೆ.
- ೨೦೨೧ ರಲ್ಲಿ ಕರ್ನಾಟಕ ಸರ್ಕಾರ ಬಜೆಟ್ ಅಧಿವೇಶನದಲ್ಲಿ ಬಸವ ಜನ್ಮಸ್ಥಳ ಇಂಗಳೇಶ್ವರ ಗ್ರಾಮದ ಅಭಿವೃದ್ದಿಗೆ ೫ ಕೋಟಿ ಹಣವನ್ನು ಘೋಷಿಸಿದರು.

೫

# ಇಂಗಳೇಶ್ವರದಲ್ಲಿಯ ಶಾಸನಗಳು





ಸುಮಾರು ೧೮೦೦ ರಲ್ಲಿ ಕನ್ನಡದ ಶಾಸನವನ್ನು ಮೊದಲು ಅಧ್ಯಯನ ಮಾಡಿದವರು ವಿಧೇಶಿಯರು. ಮೈಸೂರು ರಾಜ್ಯದ ಅಧಿಕಾರಿಯಾದಂತಹ ಕರ್ನಲ್ ಮ್ಯಾಕೆಂಜಿಯವರು ಮೊದಲಿಗೆ ಅಧ್ಯಯನ ಕೈಕೊಂಡರು. ನಂತರ





ಶಾಸನಗಳ ಅಧ್ಯಯನ ನಮ್ಮ ಕರ್ನಾಟಕದಲ್ಲಿ ಮಾಡಹತ್ತಿದರು ಮೊದಲಿಗೆ ಅಕ್ಕಿಯವರು ನಂತರ ಆರ್ ನರಸಿಂಹಾಚಾರ್ಯ, ಎಂ ಎಂ ಕಲಬುರ್ಗಿ, ಡಾ॥ ಚಿದಾನಂದ ಮೂರ್ತಿ ಹೀಗೆ ಹಲವರು ವಿದ್ವಾಂಸರು ನಮ್ಮ ನಾಡಿನ ಹಲವಾರು ದೇವಾಲಯಗಳ ಇತಿಹಾಸವನ್ನು ಜಗಕ್ಕೆ ಸಾರಿದ್ದಾರೆ ಕರ್ನಾಟಕದ ಇತಿಹಾಸಕ್ಕೆ ಸಂಬಧಿಸಿದಂತೆ ಸುಮಾರು ೩೦೦೦೦ ಹೆಚ್ಚು ಶಾಸನಗಳು ಲಭ್ಯವಿದೆ ಅವು ಹೆಚ್ಚಾಗಿ ಎಪಿಗ್ರಾಫಿಯಾ ಇಂಡಿಕಾ ಮತ್ತು ಇಂಡಿಯನ್ ಆಂಟಿಕ್ವರಿಯ ಸಂಪುಟಗಳಲ್ಲಿ ಪ್ರಕಟವಾಗಿವೆ ನಮ್ಮ ವಿಜಯಪುರ ಜಿಲ್ಲೆಯಲ್ಲಿಯೇ ೧೩೦೦ ಹೆಚ್ಚು ತಾಮ್ರ ಮತ್ತು ಕಲ್ಲಿನ ಶಾಸನಗಳು ಕಂಡು ಬರುತ್ತದೆ. ೧೦ ರಿಂದ ೧೨ ಶತಮಾನವನ್ನು ಶಿಲಾಶಾಸನಗಳ ಸುವರ್ಣಯುಗವೆಂದು ಹೇಳಬಹುದು

1) **ಶೈವ ದಾಖಲೆಯಲ್ಲಿ ಶಿವಲಿಂಗ ಶಿಲ್ಪವಿದ್ದು ಅದರ ಮುಂದೆ ಬಸವ(ನಂದಿ) ಚಿತ್ರವಿರುತ್ತದೆ**
2) **ಜೈನ್ ಶಾಸನಗಳಲ್ಲಿ ತೀರ್ಥಂಕರರ ಚಿತ್ರ**
3) **ವೈಷ್ಣವರಾಗಿದ್ದರೆ ಶಂಕ ಚಕ್ರದಿಂದ ಸುತ್ತುವರೆದಿರುವ ಕೇಶವ ಶಿಲ್ಪ ಇರುತ್ತವೆ.**

ಸಾಮಾನ್ಯವಾಗಿ ಸೂರ್ಯ ಚಂದ್ರನ ಚಿತ್ರಗಳನ್ನು ನಾವು ನೋಡುತ್ತವೆ ಅವುಗಳ ಆ ಚಿತ್ರದ ಉದ್ದೇಶ ನೀಡಿದ ರಾಜರು ಮತ್ತು ಜನರು ನೀಡಿದ ದಾನ ಮಾಡಿದ ಶೌರ್ಯ ಸೂರ್ಯ ಚಂದ್ರ ಇರುವ ವರೆಗೂ ಇರಲೆಂದು ಇವುಗಳನ್ನು ಕೆತ್ತಿಸಿರಬಹುದು. ಹಾಗೆ ಕೆಲವೊಂದು ಶಾಸನಗಳು ಬೇರೆ ರೀತಿ ಸಹ ಇರುತ್ತವೆ.

ಒಂದು ಸಮೀಕ್ಷೆಯ ಪ್ರಕಾರ ಇಂಗಳೇಶ್ವರದಲ್ಲಿ ೧೨ ಶಾಸನಗಳು ಇದ್ದವು ಎಂದು ಗೊಳಸಂಗಿಯಲ್ಲಿ ಜರುಗಿದ ಬಸವನ ಬಾಗೇವಾಡಿ ೫ನೇ ತಾಲೂಕ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ ಪುಸ್ತಕದಲ್ಲಿ ಉಲ್ಲೇಖಿಸಿರುತ್ತಾರೆ. ಆದರೆ ಇಂದು ಇಂಗಳೇಶ್ವರದಲ್ಲಿ ನಮಗೆ ೭ ಶಾಸನಗಳು ಮಾತ್ರ ಕಂಡು ಬರುತ್ತವೆ.

1) **ಸೋಮೇಶ್ವರ ದೇವಾಲಯದಲ್ಲಿ ಶೈವ ಶಾಸನ**
2) **ನಾರಾಯಣದೇವರ ದೇವಾಲಯದಲ್ಲಿ ಎಡಭಾಗ ಶೈವ ಶಾಸನ**
3) **ನಾರಾಯಣದೇವರ ದೇವಾಲಯದಲ್ಲಿ ಎಡಭಾಗ ಇನ್ನೂ ಸ್ವಲ್ಪ ಕೆಳಗೆ ವೈಷ್ಣವ ಶಾಸನ**

೪) **ತಿಂಗಳೇಶ್ವರದ ಬಾವಿಯ ಗೋಡೆಯಲ್ಲಿ ಜೈನ ಶಾಸನ**

೫) **ಸಾರಿಹೊಲ ಬಸವಣ್ಣಪ್ಪನ ಗುಡಿಯ ಮುಂದೆ ಜೈನ ಶಾಸನ**

೬) **ಬ್ರಹ್ಮಾಂಡ ಬೇರಿಮಠದ (ಪಂಚಾಳ ಸ್ವಾಮೀಜಿ)ತೋಟದಲ್ಲಿಯ ಶಾಸನ**

೭) **ಕುಂಬಾರ ಮನೆಯಲ್ಲಿಯ ಜೈನ ಶಾಸನ**

### ೧) ಸೋಮೇಶ್ವರ ದೇವಾಲಯದಲ್ಲಿ :

ಇಂಗಳೇಶ್ವರ ಊರಿನ ಒಳಗೆ ಇರುವ ಸೋಮೇಶ್ವರ ದೇವಾಲಯದ ಮೊದಲು ರಂಗಮಂಟಪದಲ್ಲಿ ಗರ್ಭಗುಡಿಗೆ ಹೋಗುವಾಗ ಎಡ ಗೋಡೆಯ ಮೇಲೆ ಕಾಣ ಸಿಗುವ ಬೃಹತ್ ೬೨ ಸಾಲುಗಳ ಲಿಪಿಗಲ್ಲು ಶೈವ ಸಂಪ್ರದಾಯ ಕ್ಕೆ ಸಂಬಂದಿಸಿದ ಲಿಪಿಗಲ್ಲಾಗಿದೆ. ಲಿಪಿಗಲ್ಲಿನ ಮೇಲ್ಬಾಗದಲ್ಲಿ ಎಡಕ್ಕೆ ನಂದಿ ಮಧ್ಯದಲ್ಲಿ ಶಿವಲಿಂಗ ಬಲಕ್ಕೆ ಆಕಳು ಮತ್ತು ಕರುವಿನ ಉಬ್ಬು ಶಿಲ್ಪಗಳು ಇವೆ. ಇದನ್ನು ೧೧೨೬ ರಲ್ಲಿ ಕಲ್ಯಾಣ ಚಾಲುಕ್ಯರ ಅರಸು ರಾಯಮುರಾರಿ ಸೋವಿದೇವನ ಆಳ್ವಿಕೆ ಕಾಲದಲ್ಲಿ ಸೋಮನಾಥ ದೇವರಿಗೆ ತರ್ದವಾಡಿ ಸಾವಿರದೊಳಗಣ ಆಡಳಿತದ ವಿಭಾಗದಲ್ಲಿ ಯಸಗಬಾಳು ಗ್ರಾಮವನ್ನು ದಾನ ನೀಡಿದ ಬಗ್ಗೆ ಉಲ್ಲೇಖಿಸುತ್ತದೆ

### ೨) ನಾರಾಯಣದೇವರ ದೇವಾಲಯದಲ್ಲಿ ಎಡಭಾಗದಲ್ಲಿ ಇರುವ ಶಾಸನ :

ಶಾಸನದ ಮೇಲೆ ಶಿವಲಿಂಗ ಇದೆ ಶ್ರೀ ನಮಸ್ತ ಎಂದು ಆರಂಭದಲ್ಲಿ ಬರೆಯಲಾಗಿದೆ ಇದು ಶೈವ ಶಾಸನವಾಗಿದೆ ಎಂದು ಹೇಳಬಹುದು

### ೩) ನಾರಾಯಣದೇವರ ದೇವಾಲಯದಲ್ಲಿ ಎಡಭಾಗ ಇನ್ನೂ ಸ್ವಲ್ಪ ಕೆಳಗೆ ಇರುವ ಶಾಸನ :

ಇದು ವೈಷ್ಣವರಿಗೆ ಸಂಬಂದಿಸಿದ ಶಾಸನವಾಗಿದೆ. ಕೃಷ್ಣ ಕೊಳಲನ್ನು ಊದುತ್ತಾ ಇರುವದು ಹಾಗು ಆಕಳು ಕರು ಬಲಕ್ಕೆ ಇದ್ದರೆ ಎಡಕ್ಕೆ ಮನುಷ್ಯ ನಮಸ್ಕಾರ ಮಾಡುತ್ತಿರುವದು ಇದೆ ಇಲ್ಲಿ ಶ್ರೀ ಗಾದಿನಾಥ ಶರಣು ಎಂಬ ಬರಹ ದಿಂದ ಪ್ರಾರಂಬವಾಗುತ್ತದೆ

### ೪) ತಿಂಗಳೇಶ್ವರದ ಬಾವಿಯ ಗೋಡೆಯಲ್ಲಿ :

ಇದು ತಿಂಗಳೇಶ್ವರದಲ್ಲಿಯ ಕಲ್ಲಪ್ಪನ ಬಾವಿಯ ಗೋಡೆಯಲ್ಲಿ ಇರುವ ಜೈನ ಶಾಸನವಾಗಿದೆ. ಜೈನ ಮುನಿಯು ಕೈ ಮುಗಿದು ಕುಳಿತಿದ್ದಾನೆ ಇಲ್ಲಿ





ನಿರುಪಮ ಮಲ್ಲಿನಾಥ ಜಿನನಾಥ ಎಂದು ಪ್ರಾರಂಭಗೊಳ್ಳುತ್ತದೆ. ಇದು ಅಗ್ಗಳ ಕವಿಗೆ ಸಂಬಂದಿಸಿದ ಶಾಸನವಾಗಿದೆ

### ೫) ಸಾರಿಹೊಲ ಬಸವಣ್ಣಪ್ಪನ ಗುಡಿಯ ಮುಂದೆ ಜೈನ ಶಾಸನ :

ಇಂಗಳೇಶ್ವರದ ಪಶ್ಚಿಮ ದಿಕ್ಕಿನಲ್ಲಿ ಇರುವ ಸಾರಿಹೊಲದಲ್ಲಿ ಈ ಶಾಸನ ಕಾಣ ಸಿಗುತ್ತದೆ. ಇದು ಬಸವಣ್ಣ ಪವಾಡ ಮಾಡಿದ ಬಾವಿಯ ಬಳಿ ಇದೆ. ಇಲ್ಲಿ ಜೈನ ಮುನಿಯು ಪದ್ಮಾಸನ ಸ್ಥಿತಿಯಲ್ಲಿ ಇದ್ದರೆ ಇಬ್ಬರು ವ್ಯಕ್ತಿಗಳು ಇವರಿಗೆ ಚಾಮರವನ್ನು ಬೀಸುತ್ತಿರುವ ಉಬ್ಬು ಚಿತ್ರ ಹೊಂದಿದೆ. ಈ ಶಾಸನವನ್ನು ನಿರ್ಲಕ್ಷಿಸಿದ್ದರಿಂದ ಇದು ವಿರೂಪಗೊಂಡಿದೆ.

### ೬) ಕುಂಬಾರ ಮನೆಯಲ್ಲಿಯ ಜೈನ ಶಾಸನ :

ಈ ಶಾಸನ ನಮಗೆ ಕಂಡು ಬಂದಿದ್ದು ೧೧-೦೨-೨೦೨೧ ರಂದು ಕುಂಬಾರ ಮನೆತನದವರು ಹೊಸ ಮನೆಯನ್ನು ನಿರ್ಮಿಸುವ ಸಲುವಾಗಿ ಹಳೆ ಕಟ್ಟಡ ತೇರವುಗೊಳಿಸಿದಾಗ ಕಂಡು ಬಂದಿತ್ತು ಇದು ಮನೆಯ ಗೊಡೆಯೊಳಗೆ ಇದ್ದದರಿಂದ ಯಾವ ಸಂಶೋಧಕರಿಗೂ ಇದು ಕಂಡು ಬಂದಿಲ್ಲ ಇದು ಸಹ ಶಿಥಿಲಾವಸ್ಥೆಯಲ್ಲಿ ಇರುವ ಜೈನ ಧರ್ಮಕ್ಕೆ ಸಂಬಂಧಿಸಿದ ಶಾಸನವಾಗಿದೆ. ಇದನ್ನು ಬೆಂಗಳೂರಿನಲ್ಲಿ ವಿದ್ಯಾಭ್ಯಾಸಮಾಡಿ ತುಮಕೂರಿನಲ್ಲಿ ಕೆಲಸ ಮಾಡುತ್ತಿರುವ ಶ್ರೀ ಪರಮಶಿವ ಮೂರ್ತಿಯವರು ಬಿಡಿಸಿ ಹೇಳಿದ್ದಾರೆ ಅದು ಹೀಗಿದೆ

- ಅತಿಶಯ ಚಿತ್ರಭಾನು ಸಂವತ್ಸರದ ಶ್ರಾವಣ ಸುಕ
- ಪಂಚಮುಯುಕ ಬ್ರಹ್ಮಮ ವಂ
- ಹೊಳ ಮುತ್ತರಾನ್ವಿಕವೆನೆ ನೆ
- ಮಾಯಿ ಸೆಟಿಯು



## ವೀರಗಲ್ಲು :



ವೀರಗಲ್ಲು ನಾಡಿಗಾಗಿ ಮಾಡಿದ ವೀರರ ಕಥೆಯನ್ನು ಸಾರುವ ಚಿತ್ರಗಳನ್ನು ಕೆತ್ತಿರುತ್ತಾರೆ ವೀರಗಲ್ಲು ರಾಜರನ್ನು ರಕ್ಷಿಸುವಾಗ, ದನಕರುಗಳನ್ನು ಅಥವಾ ಸಂಕಷ್ಟದಲ್ಲಿರುವ ಮಹಿಳೆಯರನ್ನು ರಕ್ಷಿಸುವಾಗ, ಯುದ್ಧ ಭೂಮಿಯಲ್ಲಿ ಮರಣ ಹೊಂದಿದ ವೀರರ ನೆನಪಿಗಾಗಿ ನಿರ್ಮಿಸಲಾದ ಸ್ಮಾರಕ ಕಲ್ಲುಗಳು

**ಇಂತಹ ವೀರಗಲ್ಲನ್ನು ನಾವು ಇಂಗಳೇಶ್ವರದಲ್ಲಿಯೂ ಸಹ ಕಾಣಬಹುದು :**

೧) ತಿಂಗಳೇಶ್ವರದಲ್ಲಿಯ ಚಂದ್ರಮೌಳೀಶ್ವರ ದೇವಾಲಯದ ಮುಖ್ಯ ದ್ವಾರದ ಮುಂದೆ

೨) ತಿಂಗಳೇಶ್ವರದಲ್ಲಿಯ ಹಣಮಂತ ದೇವರಗುಡಿಯ ದ್ವಾರದ ಮುಂದೆ

೩) ಬಸವನ ಬಾಗೇವಾಡಿಯ ರೋಡಿನ ಪಕ್ಕದಲ್ಲಿರುವ ಹಾಲಬಾವಿಯ ಕಟ್ಟಿಯ ಮೇಲೆ

೪) ರಬಿನಾಳಕ್ಕೆ ಹೋಗುವ ದಾರಿಯ ಪಕ್ಕದಲ್ಲಿ ಇರುವ ಪರಮಾನಂದನ ಕೆರೆಯ ಗುಡಿಯಲ್ಲಿ.







# ೬

# ಇಂಗಳೇಶ್ವರದಲ್ಲಿ ಸಂಶೋಧಿಸಲ್ಪಟ್ಟ ಸ್ಥಳಗಳ ಬಗ್ಗೆ ಪರಿಚಯ

## ಮಲ್ಲಿನಾಥನ ಬಸದಿ :

ಹಲವು ಇತಿಹಾಸಕಾರರು ಶಾಸನದಲ್ಲಿ ಉಲ್ಲೇಖಿಸಿದಂತೆ ಅಗ್ಗಳ ಕವಿಯ ತಂದೆ ಶಾಂತಿ ಪಂಡಿತನು ಇಂಗಳೇಶ್ವರದ ಚಂದ್ರಪ್ರಭ (ಶಶಿನಾಥ) ಬಸದಿಯ ಮುಂಭಾಗದಲ್ಲಿ ಕಟ್ಟಿಸಿದ ಮಲ್ಲಿನಾಥನ ಬಸದಿಯು ಎಲ್ಲಿಯು ಕಂಡು ಬರುವದಿಲ್ಲ ಎಂದು ಹೇಳುತ್ತಾರೆ ನಾವು ಸಂಶೋಧನೆಯನ್ನು ಕೈಕೊಂಡಾಗ ಒಂದು ಬಸದಿ ಇರುವಿಕೆಯನ್ನು ಕಂಡು ಹಿಡಿದೇವು ಅದು ಇದೇ ಆಗಿರಬಹುದೆಂದು ನಮ್ಮ ಅಭಿಪ್ರಾಯ ಅಷ್ಟೇ. ಇದಕ್ಕೆ ಪೂರಕವಾಗುವಂತೆ ಈ ಕೆಳಗಿನ ಅಂಶವನ್ನು ಗಮನಿಸೋಣ.

ರೇವಣಸಿದ್ದಶ್ವರರ ಗುಡಿಗೆ ಹೋಗುವಾಗ ಎಡ ಭಾಗದಲ್ಲಿ (ಗುಡಿಯ ಪಕ್ಕ) ಒಂದು ಮೂರ್ತಿ ಕಾಣ ಸಿಗುತ್ತದೆ. ಈ ಮೂರ್ತಿಯನ್ನು ಊರಿನ ಜನ ಬೆತ್ತಲೆ ಬೌರಮ್ಮ ಎಂದು ಕರೆಯುತ್ತಿದ್ದರು, ಯಾರು ಈ ಬೆತ್ತಲೆ ಬೌರಮ್ಮ ಎಂದರೆ ರೇವಣಸಿದ್ದರ ಸ್ಥಳ ಪುರಾಣದಲ್ಲಿ ಬರುವ ಸಜ್ಜನ ಮನೆತನದ ಅಜ್ಜಮ್ಮನ ಸೊಸೆ ಇವಳು ಶ್ರೀ ಗುರು ರೇವಣಸಿದ್ದರಿಗೆ ಮೀಸಲಿಟ್ಟ ಎಡೆ (ಪ್ರಸಾದ) ಯನ್ನು ಎಂಜಲು ಮಾಡಿ ಗುರುವಿಗೆ ಕೊಡಲು ಹೋದಾಗ ಗುರುವಿನಿಂದ ದಂಡನೆಗೆ ಒಳಗಾದವಳು. ಆದ್ದರಿಂದ ಇವಳ ಬೆತ್ತಲೆಯಾಗಿ ನಿಂತಿದ್ದಾಳೆ ಎಂದು ಊರ ಜನರ ನಂಬಿಕೆ.

ಬೆತ್ತಲೆ ಬೌರಮ್ಮ ಎಂದು ಊರ ಜನ ಕರೆದರೂ, ಈ ಮೂರ್ತಿ ಜೈನ ಮುನಿಯದು, ಇದರಲ್ಲಿ ಸಂಶಯವಿಲ್ಲ ಆದರೆ ಈ ಮೂರ್ತಿಯನ್ನು ನೋಡಿದ ಮೇಲೆ ಸಂಶೋಧಕರಾದ ಶ್ರೀ ವ್ಹಿ.ಎಸ್ ಬಡಿಗೇರವರು ಈ ರೀತಿ ಉಲ್ಲೇಖಿಸಿದ್ದಾರೆ

## ನೇಮಿನಾಥನ ಮೂರ್ತಿ :

ಇಂಗಳೇಶ್ವರದ ಗುಡ್ಡದ ಗವಿಯಲ್ಲಿರುವ ಈ ಮೂರ್ತಿಗೆ ರೇವಣಸಿದ್ಧ ಎಂದು ಸ್ಥಳೀಯ ಜನರು ಕರೆಯುತ್ತಾರೆ ನಾಲ್ಕು ಅಡಿ ಎತ್ತರ ಮೇಲೆ ಏಳು ಹೆಡೆಗಳುಳ್ಳ ಸರ್ಪ, ಜಟಾಮುಕುಟ,ಕೊರಳ ಕಿವಿ ಆಭರಣಗಳು, ಪದ್ಮಾಸನ ಯೋಗ ಮುದ್ರೆ, ಎರಡೂ ಕೈಗಳಿಗೆ ಸರ್ಪಗಳು ಸುತ್ತಿಕೊಂಡಿರುವ ಇದು ಜೈನ ನೇಮಿನಾಥನ ಮೂರ್ತಿ ಎಂದು ಸ್ಪಷ್ಟವಾಗುವುದು.*

ಈ ತರನಾಗಿ ಹೇಳಿದ್ದಾರೆ ಆದರೆ ನಾವು ಇಲ್ಲಿ ಗಮನಿಸಬೇಕಾದ ವಿಷಯ ಯಾರು ಈ ನೇಮಿನಾಥ ಎಂದು ನೋಡುವದಾದರೆ ಇವರು ೨೨ ನೇ ತೀರ್ಥಂಕರ ಇವನ ತಂದೆ ಸಮುದ್ರ ವಿಜಯ ತಾಯಿ ಶಿವದೇವಿ ಜನ್ಮಕ್ಷೇತ್ರ ದ್ವಾರಾವತಿ ಶ್ರಾವಣ ಶುದ್ಧ ೬ ಎಣ್ಣೆಗೆಂಪು ಲಾಂಛನ ಶಂಖ ಇವರು ಸಹ ಪದ್ಮಾಸನ ಸ್ಥಿತಿಯಲ್ಲಿ ಕುಳಿತಿದ್ದಾರೆ. ಆದರೆ ನಮ್ಮ ದೇವರು ಇವರಲ್ಲ ಎನ್ನುವದಕ್ಕೆ ಇರುವ ಸಾಕ್ಷಗಳು ೧) ಜೈನ ಮುನಿಗಳು ಲಿಂಗುವಿನ ಮೇಲೆ ಕುಳಿತುಕೊಳ್ಳುವದಿಲ್ಲ. ನಮ್ಮ ಗುರು ಲಿಂಗುವಿನ ಮೇಲೆ ಕುಳಿತುಕೊಂಡಿದ್ದಾರೆ. ೨) ನಾವು ನೋಡಿದ ಹಾಗೆ ಜೈನ ಮುನಿಯ ಕೈಗಳಿಗೆ ನಾಗರ ಹಾವು ಸುತ್ತಿಕೊಂಡಿಲ್ಲ. ನಮ್ಮ ಗುರುವಿಗೆ ಎರಡು ಕೈಗೆ ಹಾವು ಸುತ್ತಿಕೊಂಡಿದೆ ೩) ಜೈನ ಮುನಿಗಳ ಎದೆಯ ಮೇಲೆ ಲಿಂಗವು ಇರುವದಿಲ್ಲ ಆದ್ದರಿಂದ ಇವರು ನಮ್ಮ ರೇವಣಸಿದ್ದರು ಎಂದು ನಾವು ಹೇಳುತ್ತೇವೆ.

ಈಗ ಈ ಬೆತ್ತಲೆ ಬೌರಮ್ಮ ಮೂರ್ತಿಯನ್ನು ಬಾಗಲಕೋಟೆ ಜಿಲ್ಲೆಯ ವಸ್ತು ಸಂಗ್ರಹಾಲದಲ್ಲಿ ೯ & ೧೦ ಶತಮಾನದಲ್ಲಿ ಇಂಗಳೇಶ್ವರದಲ್ಲಿ ಸಿಕ್ಕ ಜೈನ ವಿಗ್ರಹ ಎಂದು ಬರೆದು ಇಡಲಾಗಿದೆ. ಈ ಮೂರ್ತಿಯು ಮೊದಲು ಮಾಲಗಂಬದ ಬಳಿ ಇತ್ತು ಇದೇ ಚಂದ್ರಪ್ರಭ ಬಸದಿಯಾಗಿರಬಹುದು ಪಾಲಕಿ ಹೊಲದಲ್ಲಿ ಕಾಣುವ ಪಾಳು ದೇವಾಲಯವು ಮಲ್ಲಿನಾಥನ ಬಸದಿಯಾಗಿರಬಹುದು ಎಂದು ನಮ್ಮ ಅನಿಸಿಕೆಯಾಗಿದೆ ಇದನ್ನು ಸಂಶೋಧಕರು ಸಂಶೋಧಿಸಲಿ ಎಂದು ನನ್ನ ಕಳಕಳಿ.







ಇಂಗಳೇಶ್ವರ ಗಿರಿ ಅಳಿಯದು ಸಿರಿ





## ಮುಗ್ಧ ಸಂಗಯ್ಯ ಗವಿ :

ಬಸವಣ್ಣನವರ ಕಾಲದಲ್ಲಿ ಮುಗ್ಧ ಸಂಗಯ್ಯ ಎಂಬ ಶರಣ ಇದ್ದ ಇವನ ಬಗ್ಗೆ ಡಾ॥ ಪ್ರೋ ವೀರಣ್ಣ ದಂಡೆಯವರು ಸಂಶೋಧನೆ ಮಾಡಿ ಇತಿಹಾಸ ಕರುಹುಗಳಲ್ಲಿ ಇಂಗಳೇಶ್ವರದಲ್ಲಿಯೇ ಮುಗ್ಧ ಸಂಗಯ್ಯ ಗವಿ ಇದೆ ಆದರೆ ಇಂಗಳೇಶ್ವರದಲ್ಲಿ ಯಾರು ಈ ಗವಿಯನ್ನು ನೋಡಿಲ್ಲ ಯಾರಾದರೂ ಈ ಗವಿಯ ಬಗ್ಗೆ ಗೊತ್ತಿದ್ದರೆ ತಿಳಿಸಿ ಎಂದು ಅವರು ಯುಟ್ಯೂಬ ಚಾನಲನಲ್ಲಿ ಹೇಳಿದರು ನಾವು ಆ ಗವಿಯನ್ನು ಕಂಡು ಹಿಡಿದೇವು ಅದು ಬಾಗೇವಾಡಿಗೆ ಹೋಗುವ ರಸ್ತೆಯಲ್ಲಿ ಉಕ್ಕಲಿಯವರ ತೋಟದ ಮುಂದೆ ಇರುವ ಹಾಲುಮತದ ಸಮಾಜಕ್ಕೆ ಸೇರಿದ ಪೂಜಾರಿಯವರ ಮನೆತನದವರ ಹೊಲದಲ್ಲಿ ಇದೆ. ಇವರು ಗುಡ್ಡ ಅಗೆದು ನೆಲಸಮ ಮಾಡಿ ಬಿತ್ತಲು ಹೊಲವನ್ನು ಮಾಡಿಕೊಳ್ಳಬೇಕೆಂದು ಗುಡ್ಡವನ್ನು ಅಗೆದಾಗ ಅಲ್ಲಿ ಕಂಡು ಬಂದಿತು. ಅವರು ಅದನ್ನು ಅಷ್ಟೇ ಬಿಟ್ಟಿದ್ದಾರೆ ಮುಂದೆ ಸ್ವಲ್ಪ ದಿನಗಳಾದ ಮೇಲೆ ಇದು ನಮಗೆ ಕಾಣ ಸಿಗುವದಿಲ್ಲ ಎಕೆಂದರೆ ಇವರು ಗುಡ್ಡವನ್ನು ಅಗೆಯುತ್ತಿದ್ದಾರೆ.





## ಏಲಿಯನ್‌ಗೆ ಹೊಲುವ ದ್ವಾರಪಾಲಕಿ ಉಬ್ಬು ಚಿತ್ರ :

ಇಂಗಳೇಶ್ವರದಿಂದ ೧ ಕೀ.ಮಿ ಅಂತರದಲ್ಲಿರುವ ಉತ್ತರ ದಿಕ್ಕಿನಲ್ಲಿ ನಿರ್ಮಾಣವಾಗಿರುವ ಪರಮಾನಂದನ ಕೆರೆಯ ದೇವಾಲಯದ ಗರ್ಭಗುಡಿಯ ದ್ವಾರ ಬಾಗಿಲಲ್ಲಿ ನಿಂತಿರುವ ಉಬ್ಬು ಚಿತ್ರ ಏಲಿಯನ್‌ನನ್ನು ಹೋಲುತ್ತದೆ.





## ಸಿಂಧೂರ ಲಕ್ಷ್ಮಣ್ಣನ ಗವಿ :

ಇಂಗಳೇಶ್ವರದ ಪೂರ್ವ ದಿಕ್ಕಿಗೆ ಸುಮಾರು ೨ ಕೀ.ಮಿ ದೂರವಿರುವ ಖಾಸಗಿಯವರ ಹೊಲದಲ್ಲಿ ಈ ಗವಿ ಕಂಡು ಬರುತ್ತದೆ. ದೂರದಿಂದ ನೋಡಲು ಕಲ್ಲಿನ ಗುಡ್ಡೆ ತರ ಕಂಡರೂ ಸಮೀಪದಲ್ಲಿ ಹೋಗಿ ನೋಡಿದಾಗ ಮಾತ್ರ ಇಲ್ಲಿ ಗುಡಿ ಇರುವದು ಅರುವಿಗೆ ಬರುತ್ತದೆ ಗ್ರಾಮದ ಕೆಲ ಜನರ ಪ್ರಕಾರ ಇದು ಸ್ವಾತಂತ್ರ್ಯ ಹೋರಾಟಗಾರ ಸಿಂಧೂರ ಲಕ್ಷ್ಮಣ್ಣ ಇಲ್ಲಿ ಬಂದು ವಸ್ತಿ ಮಾಡಿದ ಆ ಕಾರಣದಿಂದಲೇ ಈ ಪಾಳು ದೇವಾಲಯಕ್ಕೆ ಸಿಂಧೂರ ಲಕ್ಷ್ಮಣ್ಣನ ಗವಿಯಂದು ಕರೆಯಲಾಗುತ್ತದೆ.







## ಗ್ರಾಮದ ಪ್ರಮುಖ ದೇವಾಲಯಗಳು :

### ಸೋಮನಾಥ ದೇವಾಲಯ (ದೇಗುಲ ಗುಡಿ) :



ಸೋಮನಾಥ ದೇವಾಲಯವು ಒಂದು ಕಟ್ಟೆಯ ಮೇಲೆ ಕಟ್ಟಿದ ದೇವಾಲಯ. ಈ ಗುಡಿಯ ವಿಶೇಷವೆನೆಂದರೆ ಇದು ಪಶ್ಚಿಮಕ್ಕೆ ಮುಖ ಮಾಡಿದ ಶಿವ ದೇವಾಲಯವಾಗಿದೆ. ಗುಡಿಯ ಸುತ್ತಲು ಹಲವಾರು ಶಿಲ್ಪವನ್ನು ಕಲ್ಲಿನಲ್ಲಿ ಕೆತ್ತಿದ್ದಾರೆ ಗರ್ಭ ಗುಡಿಗೆ ಹೋಗುವ ಎದುರಿಗೆ ಸ್ತ್ರೀ ಶಿಲ್ಪಗಳು ನಮಗೆ

ಕಾಣ ಸಿಗುತ್ತದೆ ಇಲ್ಲಿಯ ಒಂದು ಶಿಲ್ಪ ಬದಾಮಿ ಚಾಲುಕ್ಯರ ಹಣೆಯ ಮೇಲೆ ಕುಂಕುಮ ಇಟ್ಟುಕೊಳ್ಳುವ ಶಿಲ್ಪ ಇಲ್ಲಿದೆ ಅದರಂತೆ ಬಲಕ್ಕೆ ಸ್ತ್ರೀ ಪುರುಷರ ನಗ್ನ ಶಿಲ್ಪಗಳಿದ್ದರೆ, ಎಡಭಾಗದಲ್ಲಿ ವಿಶೇಷವಾದ ಹನುಮಂತ (ಆಂಜನೇಯ) ಕೃಷ್ಣಾ ನೃತ್ಯ ನಿರತ ಸ್ತ್ರೀ ಹಾಗೂ ಹಲವಾರು ದೇವರ ಶಿಲ್ಪವನ್ನು ಕಾಣಬಹುದು ಈ ಗುಡಿಯು ಎರಡು ರಂಗ ಮಂಟಪದಿಂದ ಕೂಡಿದೆ ಮೊದಲ ಮಂಟಪವು ೧೬ ಕಂಬದಿಂದ ಕೂಡಿದೆ ಮಂಟಪದ ಒಳಗೆ ನವಗ್ರಹ ಶಿಲ್ಪ ಕೆತ್ತನೆಗಳು ಅದರ ಸುತ್ತ ಇರುವ ನಾಲ್ಕು ಕಂಬದ ಮೇಲೆ ನಾಲ್ಕು ಸೂರ್ಯ ಚಕ್ರಗಳು ಹಾಗೂ ಸುತ್ತಲು ಎಂಟು ಸೂರ್ಯ ಚಕ್ರವು ಕಂಡು ಬರುತ್ತವೆ ಗರ್ಭ ಗುಡಿಯ ಎಡಗಡೆ ಒಂದು ಲಿಪಿಯಗಲ್ಲನ್ನು ಕಾಣಬಹುದು ಅಲ್ಲಿ ನಂದಿ ಶಿವಲಿಂಗ ಆಕಳು ಕರುವಿನ ಉಬ್ಬು ಶಿಲ್ಪಗಳಿವೆ. ಮತ್ತೆ ಒಳಗಡೆ ಹೋದಾಗ ಎಡಕ್ಕೆ ಮತ್ತು ಬಲಕ್ಕೆ ಒಂದೇ ರೀತಿಯ ಶಿವಲಿಂಗ ಕಾಣಬಹುದು ನಡುವೆ ಈಗ ಹೋಗಲು ಮೂರು ದಾರಿಗಳಿವೆ ದೇವಾಲಯವಿದು.

**ನಾರಾಯಣದೇವಾಲಯ :**



ಈ ದೇವಾಲಯವು ಇಂಗಳೇಶ್ವರದಲ್ಲಿ ಇರುವ ಎಕೈಕ ವೈಷ್ಣವ ದೇವಾಲಯವೆಂದರೆ ಅದು ನಾರಾಯಣಪ್ಪನ ಗುಡಿ ಇದು ಗ್ರಾಮದ ಮಧ್ಯಭಾಗವಾದ ಹಿರೇಮಠದ ಹತ್ತಿರ ಇದೆ ಇದು ಮೊದಲು ಶೈವ ದೇವಾಲಯವಾಗಿತ್ತು ನಂತರ ವೈಷ್ಣವ ದೇವಾಲಯವಾಗಿ ರೂಪಗೊಂಡಿತು.





ಶೈವ ಹಾಗೂ ವೈಷ್ಣವ ಸಂಪ್ರದಾಯದಂತೆ ಇಲ್ಲಿ ಶಿವಲಿಂಗ ಹಾಗೂ ವಿಷ್ಣುವಿನ ವಿಗ್ರಹಗಳು ಇವೆ. ಈ ವಿಗ್ರಹವು ಅತಿ ಮನೋಹರವಾಗಿದ್ದು ಬಹಳ ಸೂಕ್ಷ್ಮ ಕೆತ್ತನೆಯಿಂದ ಕೂಡಿದೆ ವಿಗ್ರಹದ ಸುತ್ತಲೂ ವಿಷ್ಣುವಿನ ೧೦ ಅವತಾರದ ಉಬ್ಬು ವಿಗ್ರಹಗಳು ಇವೆ ನಾರಾಯಣನ ವಿಗ್ರಹದ ಕೈಬೆರಳಿನ ನುಣೂಪಾದ ಉಗುರು ಸಹ ಕೆತ್ತಿದ ಕಲಾಕಾರನ ಕೈಚಳಕ್ಕೆ ಸಲಾಮ ಹೇಳಲೇಬೇಕು.

ಇಲ್ಲಿ ಒಂದು ರಂಗ ಮಂಟಪ ಇದೆ. ಈ ದೇವಾಲಯದ ಕೆಳಗೆ ನೆಲಮಾಳಿಗೆ ಇದೆ ಮತ್ತು ಸಂಸ್ಕೃತ ಭಾಷೆಯ ಪುಸ್ತಕಗಳು ನಮಗೆ ಕಾಣ ಸಿಗುತ್ತವೆ. ಕುಲಕರ್ಣಿ ಮನೆತನದವರು ಈ ದೇವಾಲಯವನ್ನು ಪೂಜೆ ಮಾಡುತ್ತಾರೆ ಇವರಿಗೆ ದತ್ತಿಹೊಲವು ಇದೆ ಎಂದು ತಿಳಿದು ಬರುತ್ತದೆ

**ಕಲ್ಲಿನಾಥ ದೇವಾಲಯ (ಚಂದ್ರಶಾಲೆ) :**

ಎಲ್ಲಾ ಗುಡಿಗಳಿಗಿಂತ ಇದು ಸ್ವಲ್ಪ ಭಿನ್ನವಾದ ದೇವಾಲಯ ಎಂದು ಹೇಳಬಹುದು ಎಕೆಂದರೆ ಹಳೆಯ ದೇವಾಲಯದಲ್ಲಿಯೇ ಅತಿ ಎತ್ತರದ ದೇವಾಲಯ ಇದು ಇಲ್ಲಿ ಗರ್ಭಗುಡಿಯಲ್ಲಿ ಶಿವಲಿಂಗ ಹಾಗೂ ಒಂದು ರಂಗ ಮಂಟಪವಿದೆ ಗುಡಿಯ ಹೊರಗೆ ಗಣೇಶನ ವಿಗ್ರಹ ರಾಮ ಲಕ್ಷ್ಮಣರ ವಿಗ್ರಹ ನಾಗರ ಕಲ್ಲುಗಳು ಇವೆ

**ಚಂದ್ರಮೌಳಿಶ್ವರ ದೇವಾಲಯ :**



ಇದು ತಿಂಗಳೇಶ್ವರದಲ್ಲಿ ಇದೆ. ಗುಡಿಯ ಮುಂದೆ ನಾಗರ ಕಲ್ಲುಗಳು, ನಂದಿ ವಿಗ್ರಹಗಳು ಹಾಗೂ ವೀರಗಲ್ಲು ಇವೆ ಹಾಳಾದ ಜಗುಲಿ ಇವೆ ಎಡ ಹಾಗೂ ಬಲ ಭಾಗಕ್ಕೆ ಶಿವಲಿಂಗ ಇವೆ ಗರ್ಭ ಗುಡಿಯಲ್ಲಿ ದೊಡ್ಡ ಶಿವಲಿಂಗ

ಇದೆ ಈ ದೇವಾಲಯಕ್ಕೆ ಚಂದ್ರಮೌಳೀಶ್ವರ ಎಂದು ಕರೆಯಲು ಕಾರಣವೇನೆಂದರೆ ಇಲ್ಲಿ ತಿಂಗಳಿಗೊಮ್ಮ ಬರುವ ಹುಣ್ಣಿಮೆ ಚಂದ್ರನ ಬೆಳಕು ನೇರವಾಗಿ ಈಶ್ವರ ಲಿಂಗದ ಮೇಲೆ ಬೀಳುತಿತ್ತು ಹಾಗೂ ಇಲ್ಲಿ ಬೆಳಕು ಹಾಲಿನಂತೆ ಹರಡುತಿತ್ತು ಅದಕ್ಕೆ ಈ ಸ್ಥಳವನ್ನು ತಿಂಗಳೇಶ್ವರ ಎಂದು ಕರೆದಿದ್ದಾರೆ.

**ಅಕ್ಕನಾಗಮ್ಮನ ಗವಿ :**

ರೇವಣಸಿದ್ದರ ಬೆಟ್ಟದ ಪೂರ್ವದಿಕ್ಕಿಗೆ ಅಕ್ಕನಾಗಮ್ಮ ಗವಿ ಇದೆ. ಗವಿಯ ಒಳಗೆ ಪ್ರವೇಶಿಸಲು ಸುಮಾರು ೨೫ ಪೂಟ್ ಒಬ್ಬರೆ ಕುಳಿತುಕೊಂಡು ಒಳಗೆ ಹೋಗಬೇಕು ಮುಂದೆ ವಿಶಾಲವಾದ ಸ್ಥಳ ಸಿಗುತ್ತದೆ. ನಾಲ್ಕು ಫೂಟ್ ಎತ್ತರದಲ್ಲಿ ಇರುವ ಗವಿಯ ಗೋಡೆಯಲ್ಲಿ ಚನ್ನಬಸವಣ್ಣ ಮೂರ್ತಿ ಹಾಗೂ ಅಕ್ಕನಾಗಮ್ಮ ಕೇವಲ ಮುಖವಿರುವ ಮೂರ್ತಿ ನಮಗೆ ಕಾಣ ಸಿಗುತ್ತದೆ ಮುಖವಿರುವ ವಿಗ್ರಹವು ಬಹಳ ದೊಡ್ಡದಾಗಿದೆ ಉಳಿದ ದೇಹದ ಭಾಗ ನಮಗೆ ಕಾಣ ಸಿಗುವದಿಲ್ಲ. ಹಾಗೂ ಅಲ್ಲಿ ಶಿವಲಿಂಗಗಳು ಸಹ ಇವೆ. ಗವಿಯ ಮೇಲೆ ಚನ್ನಬಸವಣ್ಣನವರ ದೇವಾಲಯ ಇದೆ.

ಈ ಗವಿಯು ಮುಂದೆ ನಾಗೋಡ ಗುಡ್ಡಕ್ಕೆ ಹೋಗುತ್ತದೆ ಅಲ್ಲಿರುವ ದೇವರು ಹುಂಜ ಬಿಟ್ಟ ನಮ್ಮ ರೇವಣಸಿದ್ದ ದೇವರು ಬೆಕ್ಕು ಬಿಟ್ಟರು ಹುಂಜ ಬಂದಿತು. ಆದರೆ ನಮ್ಮ ದೇವರು ಬಿಟ್ಟ ಬೆಕ್ಕು ಗವಿಯ ಒಳಗೆ ಇರುವ ಬಾವಿಯಲ್ಲಿ ಬಿದ್ದು ಸತ್ತಿತು. ಮುಂದೆ ಈ ಗವಿಯಲ್ಲಿ ೫ ಜನ ಕಳಸದವರು ೫ ಜನ ಡೊಳ್ಳಿನವರು ಒಳ ಹೋದರು ಅವರು ಮತ್ತೆ ತಿರುಗಿ ಬರಲಿಲ್ಲ ಕಾರಣ ಈ ಗವಿಯ ಬಾಗಿಲನ್ನು ಅಕ್ಕ ನಾಗಮ್ಮನ ಮೂರ್ತಿ ಹಾಗೂ ಶಿವಲಿಂಗದ ಸ್ವಲ್ಪ ಜಾಗ ಬಿಟ್ಟು ಮುಚ್ಚಿದ್ದಾರೆ. ಎಂದು ಹಿರಿಯರು ಹೇಳಿಕೊಂಡು ಬಂದಿದ್ದಾರೆ ಗವಿಯ ಸ್ವಲ್ಪ ದೂರದಲ್ಲಿಯ ಬಲಭಾಗಕ್ಕೆ ಇರುವ ವಿಷ್ಣುವಿನ ಮೂರ್ತಿಯನ್ನು ಕಲ್ಲಿನ ಕೋಳಿ ಎಂದು ಎಂದು ಜನ ಕರೆಯುತ್ತಾರೆ. ಹಾಗೆ ಗವಿಯ ಮೇಲೆ. ಗವಿಯ ಕೆಳಗೆ ಆದಿ ಮಾನವನ ವಾಸಸ್ಥಳದ ಕುರುಹು ಲಭಿಸುತ್ತವೆ . ತೋಳಗಳು, ಮುಳ್ಳು ಹಂದಿಗಳು, ಹಲವಾರು ಕಾಡು ಪ್ರಾಣಿಗಳು ಅಲ್ಲಲ್ಲಿ ಗುಡ್ಡ ಕೊರೆದು ಮನೆ ಮಾಡಿವೆ.







೭

# ಧಾರ್ಮಿಕ ಕೇಂದ್ರ ಎಂದು ಕರೆಸಿಕೊಳ್ಳಲು ಕಾರಣ

ಇಂಗಳೇಶ್ವರವನ್ನು ಸಹ ದೇವಾಲಯದ ತೊಟ್ಟಿಲು ಎಂದು ಕರೆಯಬಹುದು ಕಾರಣ ಇಲ್ಲಿ ಹಲವಾರು ದೇವಾಲಯ ಕಾಣಸಿಗುತ್ತವೆ ಇಲ್ಲಿ ಹೆಚ್ಚು ಗಂಡು ದೇವರ ದೇವಾಲಯ ಇವೆ. ಹೆಣ್ಣು ದೇವರ ದೇವಾಲಯಗಳು ಕಡಿಮೆ ಇವೆ. ಕಾರಣ ಶ್ರೀ ಗುರು ರೇವಣಸಿದ್ದರು ಬಂದಾಗ ಅವರನ್ನು ಓಡಿಸಿದರು ಎಂದು ಊರಿನ ಜನರ ಅಭಿಪ್ರಾಯ. ಅದರಂತೆ ನಮ್ಮ ಗ್ರಾಮದಲ್ಲಿ ಎಷ್ಟು ದೇವಾಲಯ ಇವೆ ಎಂದು ನಾವು ಅಧ್ಯಯನವನ್ನು ಕೈಗೊಂಡಾಗ ಕಂಡು ಬಂದ ದೇವಾಲಯಗಳು

ದೇವಾಲಯದ ಪಟ್ಟಿ ಈ ಕೆಳಗಿನಂತಿದೆ :

**ಹಳೆ ದೇವಾಲಯಗಳು :**

೧) ಕಲ್ಲಿನಾಥನ ದೇವಾಲಯ : ಚಂದ್ರಶಾಲೆ

೨) ಸೋಮನಾಥ ದೇವಾಲಯ : ಸಜ್ಜನರ ಓಣಿ

೩) ನಾರಾಯಣ ದೇವಾಲಯ : ಚಾವಡಿ

೪) ಶೋಭಾನ ದೇವಾಲಯ : ಪಾದಗಟ್ಟಿ ಹತ್ತಿರ

೫) ಚಂದ್ರಮೌಳೀಶ್ವರ ದೇವಾಲಯ : ತಿಂಗಳೇಶ್ವರ

೬) ಹನುಮಾನ ದೇವಾಲಯ : ತಿಂಗಳೇಶ್ವರ

೭) ಶಿವ ದೇವಾಲಯ : ತಿಂಗಳೇಶ್ವರ (ಚಿಕ್ಕದಾದ)

೮) ಈಶ್ವರ ದೇಗುಲ : ತಿಂಗಳೇಶ್ವರ

೯) ಹಿರೋಡೇಶ್ವರ ದೇವಾಲಯ : ತಿಂಗಳೇಶ್ವರ

೧೦) ಪಾಳು ದೇವಾಲಯ (ತಿಹ) :

೧೧) ಪಾಳು ದೇವಾಲಯ (ಪಾ) :

೧೨) ಅಕ್ಕನಾಗಮ್ಮನ ಗವಿ : ರೇವಣಸಿದ್ದೇಶ್ವರ ಬೆಟ್ಟ(ಬಾಗೇವಾಡಿ ರೋಡ್)

೧೩) ರೇವಣಸಿದ್ದೇಶ್ವರ ದೇವಾಲಯ : ರೇವಣಸಿದ್ದೇಶ್ವರ ಬೆಟ್ಟ

೧೪) ಪಾಳು ದೇವಾಲಯ (ಪಹೋ) : ಹೊಲ

೧೫) ನಂದಿ ದೇವಾಲಯ : ಸಾರಿ ಹೊಲ

೧೬) ದೇವರಿಲ್ಲದ ದೇವಾಲಯ : ಸಾರಿ ಹೊಲ (ನಂದಿ ದೇವಾಲಯ ಪಕ್ಕ)

೧೭) ಯಲ್ಲಮ್ಮ ದೇವಾಲಯ : ಬಾಗೇವಾಡಿ ರೋಡ್

೧೮) ಪಾರ್ವತಿ ದೇವಾಲಯ : ಕೋಟೆ ಗೋಡೆ (ಎ.ಪಿ.ಎಂ.ಸಿ. ಎದುರು)

೧೯) ನೂತವ್ವನ ಗುಡಿ : ದಿಂಡವಾರ ರೋಡ್

೨೦) ಪಾಳು ದೇವಾಲಯ : ದಿಂಡವಾರ ರೋಡ್(ಸಿಂದೂರ ಲಕ್ಷ್ಮಣ ಗವಿ)

೨೧) ಪರಮಾನಂದನ ಕೆರೆ : ರಬಿನಾಳ ರೋಡ್

೨೨) ಬಾದುಬ್ಬೆ (ಏಳು ಮಕ್ಕಳ ತಾಯಿ) : ಕೋಟೆ ಗೋಡೆ (ವಾಸಪ್ಪ ಗೌಡರ ಮನೆ ಹತ್ತಿರ)

**ಅದರಂತೆ ಊರಿನಲ್ಲಿ ಮತ್ತು ಸೀಮೆಯಲ್ಲಿರುವ ಹೆಣ್ಣು ದೇವರು ದೇವಾಲಯಗಳು :**

೨೩) ಲಕ್ಕಮ್ಮಾಯಿ ದೇವಾಲಯ : ದಿಂಡವಾರ ರೋಡ್

೨೪) ಮಾಳಿಲಕ್ಷ್ಮೀ : ಮೆಂಡೆಗಾರ ಹೊಲ

೨೫) ದೇವ್ರ ಲಕ್ಷ್ಮೀ : ಅವಟಿಯವರ ಹೊಲ

೨೬) ಲಕ್ಷ್ಮೀ ದೇವಾಲಯ : ಸೋಮೇಶ್ವರ ದೇವಾಲಯ ಹತ್ತಿರ

೨೭) ಕ್ವಾಟಿ ಲಕ್ಷ್ಮೀ : ಕಟಗಿಯರ ಓಣಿ

೨೮) ಲಕ್ಷ್ಮೀ : ಕುಲಕರ್ಣಿಯರ ಮನೆ ಹತ್ತಿರ

೨೯) ಹುಡೇದ ಲಕ್ಷ್ಮೀ : ನೆಲಮಾಳಸಿದ್ದೇಶ್ವರ ದೇವಾಲಯ ಹತ್ತಿರ

೩೦) ಕೊಪ್ಪದ ದುರ್ಗಮ್ಮ : ಕೇರಿ (ಮಾದರ ಸಮಾಜ ದಿಂಡವಾರ ರೋಡ್)





೩೧) ಮಾಯಮ್ಮ : ಕೇರಿ(ದಿಂಡವಾರ ರೋಡ್)

೩೨) ಮರಗಮ್ಮ : ಕೇರಿ(ದಿಂಡವಾರ ರೋಡ್)

೩೩) ಲಕ್ಷ್ಮೀ : ಕೇರಿ(ದಿಂಡವಾರ ರೋಡ್)

೩೪) ದುರ್ಗಮ್ಮ

೩೫) ಷಟಿಗೆವ್ವ

೩೬) ಮರಗಮ್ಮ

೩೭) ಕೊಣಮ್ಮದೇವಿ : ವಡ್ಡರ ಓಣಿ (ಹೈಸ್ಕೂಲ್ ಹತ್ತಿರ)

ಕೇರಿಯಲ್ಲಿ ಎರಡು ಸಮಾಜವಿದ್ದು ಅವರು ತಮ್ಮ ತಮ್ಮ ಜನಾಂಗಕ್ಕೆ ತಕ್ಕಂತೆ ಎರಡೆರಡು ಗುಡಿಯನ್ನು ಮಾಡಿಕೊಂಡಿದ್ದಾರೆ ದುರ್ಗಮ್ಮ ಮರಗಮ್ಮ ಷಟಿಗೆವ್ವ ಗುಡಿ.

- ಕೊಪ್ಪದ ದುರ್ಗಮ್ಮ ಜಾತ್ರೆ : ಬಾದಮಿ ಅಮಾವಾಸೆ
- ಮಾಯಮ್ಮ ಯುಗಾದಿ ಅಮವಾಸೆ ದಿನ
- ಮರಗಮ್ಮ ಬಾದಮಿ ಅಮಾವಾಸೆ
- ಹೊಲೇರ ಸಮಾಜ
- ದುರ್ಗವ್ವ ಬಾದಮಿ ಅಮವಾಸೆ
- ಮರಗಮ್ಮ ಬಾದಮಿ ಅಗ್ಗಿ ಹಾಯುವರು
- ಷಟಿಗೆವ್ವ ಯುಗಾದಿ ಅಮವಾಸೆ.

**ಅದರಂತೆ ಊರಿನಲ್ಲಿರುವ ಮತ್ತು ಸೀಮೆಯಲ್ಲಿರುವ ಗಂಡು ದೇವರ ದೇವಾಲಯಗಳು :**

೩೮) ಶರಣಮುತ್ಯಾನ (ಭೀಮರಾಯಮುತ್ಯಾ) : ಊರ ಹೊರಗೆ ಪೂರ್ವ ದಿಕ್ಕಿನಲ್ಲಿ

೩೯) ನೆಲಮಾಳಸಿದ್ಧನ ಗುಡಿ : ಮ್ಯಾಲಿನ ಓಣಿ (ಹುಡೆದ ಗಡ್ಡಿ)

೪೦) ಸಿಕೀಂದ್ರ ಬಾದಷಾ ದರ್ಗಾ : ಊರ ಪಕ್ಕ ದಕ್ಷಿಣಕ್ಕೆ

೪೧) ರೇವಯ್ಯಮುತ್ಯಾನ ಗುಡಿ : ಹಳ್ಳಿಯವರ ಓಣಿ

೪೨) ಬಸವ ಸ್ಮಾರಕ : ಕುಲಕರ್ಣಿಯರ ಓಣಿ

೪೩) ಹಿರೋಡೇಶ್ವರ ಗುಡಿ : ಹಳ್ಳಿಯವರ ಓಣಿ

೪೪) ಮಾರುತೇಶ್ವರ ದೇವಾಲಯ : ಅಗಸಿ ಹತ್ತಿರ

೪೫) ಭೀಮರಾಯ ಮುತ್ಯಾನ ಗದ್ದಿಗಿ : ಬಸ್‌ಸ್ಟ್ಯಾಂಡ

೪೬) ಗಂಗೂರ ಹಣಮಂತದೇವರ : ದಿಂಡವಾರ ರೋಡ್

೪೭) ಮೂಲ ಭೀರೇಶ್ವರ ಗುಡಿ : (ಇಂಗಳೇಶ್ವರ & ಉತ್ನಾಳ ಸೀಮಿ)

೪೮) ಹೊಸ ಯಲ್ಲಮ್ಮನ ದೇವಾಲಯ : ಬಸವ ನಗರ

೪೯) ವೆಂಕಟರಮಣ ಗುಡಿ : ಬಾಗೇವಾಡಿ ರೋಡ್

೫೦) ಭೀರಪ್ಪಮುತ್ಯಾನ ಗುಡಿ : ಬಾಗೇವಾಡಿ ರೋಡ್

೫೧) ಚೌಡೇಶ್ವರಿ ಗುಡಿ : ಕುಂಬಾರ ಓಣಿ

೫೨) ನಾಗಪ್ಪ ಗುಡಿ : ಕೋಲಕಾರ ಓಣಿ

೫೩) ಮಲ್ಲಿಕಾರ್ಜುನ ಗುಡಿ : ಗೌಡರ ಓಣಿ

೫೪) ಹಿರೋಡೇಶ್ವರ ಗುಡಿ : ಶೇಕಣ್ಣಿಯವರ ಓಣಿ

೫೫) ವೆಂಕಟೇಶ್ವರ ಗುಡಿ : ವಡ್ಡರ ಓಣಿ

೫೬) ಹುಚ್ಚ ಶಿಕೀಂದ್ರಪ್ಪ ಮುತ್ಯಾ : ಪಾದಗಟ್ಟಿ

೫೭) ಮೌನೇಶ್ವರ ಗುಡಿ : ಪಾದಗಟ್ಟಿ

೫೮) ಅಂಬಿಗರ ಚೌಡಯ್ಯ ಗುಡಿ : ಬಾಗೇವಾಡಿ ರೋಡ್

೫೯) ಮುಸ್ಲಿಂ ದೇವತೆ : ಕೇರಿ

## ಗ್ರಾಮದ ಸುತ್ತಮುತ್ತಲಿನ ದೇವತೆಗಳು :



**ಗ್ರಾಮದ ಸರಹದ್ದು ಕಾಯುವ ದೇವತೆಯರು ಇವರಾಗಿರುತ್ತಾರೆ**





೧) ಬಾಗೇವಾಡಿ ದಾರಿಯಲ್ಲಿರುವ ದ್ರಾಕ್ಷಾವಾಯಿ ಬಾಗೇವಾಡಿ ಇಂಗಳೇಶ್ವರ ಹಾಗೂ ಬಳ್ಳಾವುರ ಸೀಮೆಯನ್ನು ಕಾಯುತ್ತಿದ್ದಾರೆ.

೨) ಸರ್ಕಾರಿ ಗುಡ್ಡದ ಬಳಿ ಇರುವ ದೇವತೆ ಲಕ್ಷ್ಮೀ (ಭಾಗ್ಯದ ಲಕ್ಷ್ಮೀ) ದೇವಿಯು ಇಂಗಳೇಶ್ವರ ಹಾಗೂ ಮಸಬಿನಾಳ ಸರಹದ್ದು ಕಾಯುವಳು.

೩) ತಾಂಡೆ ಬಳಿ ಹಾಗೂ ಬಿಸನಾಳ ಸಿಮೇಯಲ್ಲಿರುವ ಮಾಳಿ ಲಕ್ಷ್ಮೀ (ಮೆಂಡೆಗಾರ ಹೊಲ) ಇಂಗಳೇಶ್ವರ ಹಾಗೂ ಬಿಸನಾಳ ಸರಹದ್ದು ಕಾಯುವಳು.

೪) ರಬಿನಾಳ ರಸ್ತೆಗೆ ಸಮೀಪವಿರುವ ದಳವಾಯಿಯರ ಲಕ್ಷ್ಮೀಯು ಇಂಗಳೇಶ್ವರ ಹಾಗೂ ರಬಿನಾಳ ಸರಹದ್ದು ಕಾಯುವಳು.

೫) ಕೊರವಂಜಿ (ಹುಡೆದರ ಹೊಲ ಮಟ್ಟಿಯರ ಹೊಲ ನಡುವೆ).

೬) ಕೊರವಂಜಿ (ಚಿಗರಿಯವರ ಹೊಲ).

೭) ಗೌರಮ್ಮನ ಗುಡ್ಡ (ಪೂಜಾರಿಯವರ ಮನೆತನದ ಹೊಲ ಬಾಗೇವಾಡಿ ರೋಡ್).

ಮಾಳಿ ಲಕ್ಷ್ಮೀಯರು ಹೊಲದಲ್ಲಿ ಸ್ವಲ್ಪ ಎತ್ತರದ ಜಾಗದಲ್ಲಿ ನೆಲೆಸಿದ್ದಾರೆ ಹಾಗೆ ನೋಡಿದರೆ ಇಲ್ಲಿ ಕೆಳಗೆ ಐತಿಹಾಸಿಕ ಕುರುಹು ಇವೆಯೇ ಎಂದು ಭಾಸವಾಗುತ್ತದೆ. ಎಲ್ಲಾ ದೇವತೆಗಳಿಗೆ ರಾಶಿ ಮಾಡಿದ ನಂತರ ದೇವಿಗೆ ಎಂದು ನಿಧಿ(ರಾಶಿ ಮಾಡಿದ ಮೊದಲ ಕಾಳು) ಯನ್ನು ದೇವಿಗೆ ಅರ್ಪಿಸುವರು ಅಮವಾಸ್ಯೆ ದಿನ ದೇವರಿಗೆ ಹೋಗಿ ಬರುವರು. ರಾತ್ರಿ ಹೊಲದಲ್ಲಿ ಮಲಗಿಕೊಂಡವರಿಗೆ ದೇವತೆ ಕಂಡ ಭಾಸವಾಗಿದೆ ಎಂದು ಭಯದಿಂದ ಹೇಳುತ್ತಾರೆ ಬಿಸನಾಳದ ಹಾಗೂ ಇಂಗಳೇಶ್ವರದ ಸೀಮೆಯಲ್ಲಿರುವ ಬಿಸನಾಳ ಮಾಳಿ ಲಕ್ಷ್ಮೀಯ ಗುಡಿಯು ಸುಸ್ಥಿತಿಯಲ್ಲಿ ಇದೆ.

೮

# ಕೋಟೆ ಗೋಡೆಗಳು

**ಕೋಟೆ ಗೋಡೆ :**

ಆ ಕಾಲದ ರಾಜಮಹಾರಾಜರು ವೈರಿಯ ದಾಳಿಯನ್ನು ತಡೆಗಟ್ಟಲು ಗ್ರಾಮದ ಸುತ್ತಲೂ ದೊಡ್ಡದಾದ ಕೋಟೆಗೋಡೆಗಳನ್ನು ಕಟ್ಟಿ ಎತ್ತರ ಸ್ಥಳದಲ್ಲಿ ಹುಡೆಯೊಂದನ್ನು ಕಟ್ಟುತ್ತಿದ್ದರು. ಇಂಗಳೇಶ್ವರದಲ್ಲಿಯೂ ಸಹ ಇಂತಹ ಕೋಟೆಗೋಡೆಗಳು ಹುಡೆಗಳನ್ನು ನಾವು ಇಲ್ಲಿ ಕಾಣುತ್ತೇವೆ ಇಲ್ಲಿ ಮೊದಲು ೭ ಸುತ್ತಿನ ಕೋಟೆ ೧೧ ಅಗಸಿ ಇದ್ದವು ಎಂದು ಹಿರಿಯರು ಹೇಳುತ್ತಾ ಬಂದಿದ್ದಾರೆ. ಇಂಗಳೇಶ್ವರದಲ್ಲಿ ಕೋಟೆ ಗೋಡೆಯು ಅಲ್ಲಲ್ಲಿ ಕಾಣ ಸಿಗುತ್ತದೆ. ಈ ಕೋಟೆ ಗೋಡೆಗಳು ನಮಗೆ ಮೊದಲಿಗೆ ಕಂಡು ಬರುವುದು ಸಹಕಾರ ಸಂಘ ಬ್ಯಾಂಕ ಹಿಂದೆ ನಂತರ ಕಾಳಗಿಯವರ ದೊಡ್ಡಿ ಮೀಸಿಯವರ ಮನೆಯ ಬಳಿ ಪಾರ್ವತಿ ದೇವಾಲಯ ಶೇಕಣ್ಣಿಯವರ ಓಣಿಯಲ್ಲಿ ಮುಂದೆ ಹೊರಗಿನ ಅಗಸಿ ಬಳಿ ದಿ//ಶ್ಯಾಮಾಗೋಳ ಮಾಸ್ತಾರ (ಸಂಗೋಳ್ಳಿರಾಯಣ್ಣ ವೃತ್ತ) ಮನೆ ವಾಸಪ್ಪಗೌಡರ ಮನೆ ಹತ್ತಿರ ಕೋಟೆಗೋಡೆಗಳು ಇರುವಿಕೆ ಕಂಡು ಬರುತ್ತದೆ. ಕೋಟೆ ಗೋಡೆಯ ಮೇಲೆ ಮೋಹಿನುದ್ದೀನ ಮಸೂತಿ, ಪಾರ್ವತಿ ದೇವಾಲಯ ಸುಸ್ಥಿತಿಯಲ್ಲಿ ಇವೆ ಆದರೆ ಡಾ॥ ಚಿದಾನಂದ ಮೂರ್ತಿಯವರು ಉಲ್ಲೇಖಿಸಿದ ಪ್ರೋ ಪಾರ್ವತಿ ಹಿರೇಮಠರು ಉಲ್ಲೇಖಿಸಿದ ಗ್ರಾಮದೇವತೆಯಾದ ಬಾದುಬ್ಬೆ ದೇವತೆ (ಏಳು ಮಕ್ಕಳ ತಾಯಿ) ಎಂದು ಕರೆಸಿಕೊಳ್ಳುವ ಗುಡಿಯು ವಾಸಪ್ಪಗೌಡರ ಮನೆಯ ಹತ್ತಿರ ಇದೆ. ಇದು ಶಿಥಿಲಾವಸ್ಥೆಯಲ್ಲಿರುವ ಗುಡಿಯಾಗಿದೆ. ಇಲ್ಲಿ ಮಾತೆಯಾದ ದೇವತೆಯು ರಾಕ್ಷಸರನ್ನು ಮರ್ದಿಸಿದ ಮೂರ್ತಿಗಳು ಎರಡು ಇವೆ ಹಾಗೂ ಹಲವಾರು ಮೂರ್ತಿಗಳು ಇವೆ ಈ ಗುಡಿಯ ಜೀರ್ಣೋದ್ಧಾರವಾಗಬೇಕಾಗಿದೆ. ಇಂಗಳೇಶ್ವರದ ಪೂರ್ವ ದಿಕ್ಕಿಗೆ ಹುಡೇದ ಗಡ್ಡಿಯು ಇದ್ದು ಇದು ಊರಿನಲ್ಲಿಯೇ ಎತ್ತರವಾದ ಸ್ಥಳದಲ್ಲಿ ಇದೆ ಇದು ಸಹ ಅಲ್ಪ–ಸಲ್ಪ ಬಿದ್ದು ಹೋಗಿದೆ ಇಲ್ಲಿ ಹುಡೇದ ಲಕ್ಷ್ಮೀ ಹಾಗು ಇನ್ನುಳಿದ ವಿಗ್ರಹ ಕಾಣಸಿಗುತ್ತವೆ.







ಗ್ರಾಮ ದೇವತೆ ಬಾದ್ಬುಬೆ ಗುಡಿ ಫೋಟೋ ವಾಸಪ್ಪಗೌಡರ ಮನೆ ಹತ್ತಿರ

೯

# ಗ್ರಾಮ ದೇವರು

**ಸ್ಥಳ ಪುರಾಣ/ ದಂತ ಕಥೆಗಳು :**

ಇಂಗಳೇಶ್ವರವು ಮೊದಲು ಜೈನರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಹಲವಾರು ಶಾಸನಗಳಿಂದ ತಿಳಿದು ಬರುತ್ತದೆ. ಆದರೆ ಮುಂದೆ ರೇವಣಸಿದ್ದರು ಬಂದ ನಂತರ ಶೈವ ಧರ್ಮದ ಕ್ರಾಂತಿಯುಂಟಾಗಿ ಇಡೀ ಊರೇ ಶೈವ ಧರ್ಮದ ಕಡೆ ವಾಲಿತು ಎಂದು ಹೇಳಬಹುದು ಅದಕ್ಕೆ ತಾಜಾ ಉದಾಹರಣೆ ಎಂದರೆ ಈಗಲೂ ಇಂಗಳೇಶ್ವರದಲ್ಲಿ ಒಂದು ಜೈನ ಮನೆತನಗಳು ನಮಗೆ ಕಾಣ ಸಿಗುವುದಿಲ್ಲ. ಶ್ರೀ ಗುರು ರೇವಣಸಿದ್ದರು ಇವರೇ ಊರಿನ ಗ್ರಾಮದೇವರು ಆದಿಕಾಲದಿಂದಲೂ ರೇವಣಸಿದ್ದರ ಪುರಾಣವನ್ನು ವರ್ಷದ ಗೌರಿ ಹುಣ್ಣಿಮೆಯಂದು ನಡೆಸಿಕೊಂಡು ಹೊಸ್ತಲ ಹುಣ್ಣಿಮೆಯ ಜಾತ್ರೆಯವರೆಗೂ ಒಂದು ತಿಂಗಳ ಕಾಲ ನಿರಂತರವಾಗಿ ಗ್ರಾಮದ ಜನ ನಡೆಸಿಕೊಂಡು ಬರುವರು, ಭದ್ರಗಿರಿ ಪಟ್ಟಣದಲ್ಲಿ ಅಜ್ಜಮ್ಮ ಎಂಬ ಹೆಣ್ಣು ಮಗಳು ಇದ್ದಳು ಎಂದು ಉಲ್ಲೇಖಿಸುತ್ತಾ ಅದರಂತೆ ಇಂಗಳೇಶ್ವರದಲ್ಲಿ ನಡೆದ ಅಜ್ಜಮ್ಮನ ಕಥೆಯ

ಜೊತೆಗೆ ರೇವಣಸಿದ್ದರು ಮಾಡಿದ ಹಲವಾರು ಪವಾಡಗಳನ್ನು ಈ ಸ್ಥಳ ಪುರಾಣದಲ್ಲಿ ಬರೆದಿದ್ದಾರೆ ಈ ಪುರಾಣ ಯಾವ ವರ್ಷದಲ್ಲಿ ಪ್ರಾರಂಭವಾಯಿತೋ ಎಂದು ನಿಖರವಾಗಿ ತಿಳಿದಿಲ್ಲ.

## ರೇವಣಸಿದ್ದೇಶ್ವರ ಸ್ಥಳ ಪುರಾಣ :



**ಆದಿ ಗುರು ರೇವಣಸಿದ್ದೇಶ್ವರರು :** ಜಗತ್ತು ಅಧರ್ಮದ ಅಟ್ಟಹಾಸದಿಂದ ನಲಗುತ್ತಿರುವಾಗ ಧರ್ಮದ ದಾರಿ ತೋರಿಸಲು ಬಂದ ಜ್ಯೋತಿಯೇ ಆದಿ ಗುರು ರೇವಣಸಿದ್ದೇಶ್ವರರು. ಶ್ರೀ ಗುರುಗಳು ಆಂದ್ರಪ್ರದೇಶದ ನಲಗೊಂಡ ತಾಲೂಕಿನ ಕೊಲಂಪಾಕ್ (ಕೊಲ್ಲಿಪಾಕಿ)ನಲ್ಲಿ ಶಿವಲಿಂಗದಲ್ಲಿ ಜನಿಸಿ ಅನೇಕ ಜನರನ್ನು ಉದ್ಧಾರ ಮಾಡಿ, ಸಂಚರಿಸುತ್ತಾ ಭದ್ರಗಿರಿಗೆ ಬಂದಾಗ (ಈಗಿನ ಇಂಗಳೇಶ್ವರಕ್ಕೆ). ಶ್ರೀ ಗುರುವಿಗೆ ಇಲ್ಲಿ ಹೂಮಲ್ಲಿಗೆಯ ರಾಶಿಯು ಗುರುವಿನ ಕಾಲು ನೆಲಕ್ಕೆ ತಾಗದಂತೆ ರಂಗೋಲಿ ತರ ಹೂಗಳು ಹರಡಿದವು ಎಂದು ಪುರಾಣದಲ್ಲಿ ಉಲ್ಲೇಖವಿದೆ. ಅಂದರೆ ಇಲ್ಲಿ ಮೊದಲು ಅಷ್ಟೊಂದು ಸುಂದರ ಪರಿಸರ ಇತ್ತೆಂದು ತಿಳಿದು ಬರುತ್ತದೆ. ಈ ಇಂಗಳೇಶ್ವರದಲ್ಲಿ ಅಜ್ಜಮ್ಮ ಎಂಬ ಸಜ್ಜನರ (ಗಾಣಿಗೇರ) ಮನೆತನಕ್ಕೆ ಬಹಳ ಬಡತನವಿತ್ತು. ರೇವಣಸಿದ್ದರು ಪ್ರಸಾದವನ್ನು ಬೇಡುತ್ತಾ ಅಜ್ಜಮ್ಮನ ಮನೆ ಬಳಿ ಬಂದರು ಆಗ ಆ ಅಜ್ಜಮ್ಮ ಬಡತನವಿದ್ದರೂ ಪ್ರಸಾದ ನೀಡಿದಳು. ಇದರಿಂದ ಗುರುವಿಗೆ ಸಂತೋಷವಾಯಿತು. ಆಗ ಅಜ್ಜಮ್ಮ ತನ್ನ ಕಷ್ಟವನ್ನು ಶ್ರೀ ರೇವಣಸಿದ್ದರಿಗೆ ಹೇಳಿದಳು ಮುಂದೆ ರೇವಣಸಿದ್ದರು ದಿನಾಲು ಅಜ್ಜಮನ ಮನೆಗೆ ಬಂದು ಪ್ರಸಾದ ಮಾಡುಹತ್ತಿದ್ದರು ಗುರು ಹೇಗೆ ಮನೆಗೆ ಬರುತ್ತಾ ಇದ್ದನೋ ಹಾಗೇ ಅಜ್ಜಮ್ಮ ಸಿರಿತನ ಹೆಚ್ಚುತಲೇ ಹೋಯಿತು. ಹೀಗೆ ರೇವಣಸಿದ್ದರು ಅವಳ ಕಷ್ಟವನ್ನು ದೂರ ಮಾಡಿ ಸಿರಿತನವನ್ನು ದಯಪಾಲಿಸಿದರು. ಅಜ್ಜಮ್ಮ ನನಗೆ





ಸಿರಿತನ ಬಂದಿದ್ದು ಗಾಣ ಲಕ್ಷ್ಮೀಯಿಂದ ಎಂದು ತಿಳಿದು ಸಿರಿತನ ನೀಡಿದ ಗುರುವಿನ ಮರೆತು ತಮ್ಮ ಮನೆಯಲ್ಲಿ ಮುತ್ತೈದ್ಯೆಯರ ಉಣಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾಳೆ. ಆ ಸಮಯದಲ್ಲಿ ರೇವಣಸಿದ್ದರು ಜಂಗಮ ಭಿಕ್ಷೆಗೆ ಬಂದಾಗ ಇಲ್ಲಪ್ಪ... ನಮಗೆ ಭಿಕ್ಷೆಯನ್ನು ನೀಡಲು ಸಮಯ ಇಲ್ಲ ನಮ್ಮ ಮನೆಯಲ್ಲಿ ಗಾಣದಲಕ್ಷ್ಮೀ ಪೂಜೆಯನ್ನು ಇಟ್ಟುಕೊಂಡಿದ್ದೇವೆ ಆ ತಾಯಿ ನಮಗೆ ಅಷ್ಟ ಐಶ್ವರ್ಯವನ್ನು ಕೊಟ್ಟಿದ್ದಾಳೆ ನೀನು ಆಮೇಲೆ ಬಾ ಎಂದು ಹೇಳಿ ಕಳುಹಿಸುತ್ತಾರೆ ಆಗ ಶ್ರೀ ರೇವಣಸಿದ್ದರು ಮರಳಿ ಹೋಗುತ್ತಾರೆ ಮತ್ತೆ ಅದೆ ಮಾತನ್ನು ಆಡುತ್ತಾರೆ. ಆಗ ರೇವಣಸಿದ್ದರು ಕೋಪಕ್ಕೆ ತುತ್ತಾಗಿ ಮುತ್ತೈದಿಯರು ಊಟ ಮಾಡುವ ಕೈಗಳು ಅಲ್ಲೆ ನಿಂತುಕೊಳ್ಳುತ್ತವೆ ಒಬ್ಬರ ಕೈ ತಾಟಿನಲ್ಲಿ ಒಬ್ಬರ ಕೈ ಬಾಯಿಯಲ್ಲಿ ಇನ್ನೊಬ್ಬರ ಕೈ ನಡುವೆ ಹೀಗೆ ಎಲ್ಲರು ಗೊಂಬೆಯಂತೆ ಕುಳಿತ ಜಾಗದಲ್ಲಿಯೇ ಕುಳಿತು ಊಟವನ್ನು ಮಾಡದೆ ಕೈಯನ್ನು ತೊಳೆಯದೆ ಅಷ್ಟೇ ನಿಂತು ಬಿಡುತ್ತಾರೆ. ಇದನ್ನು ನೋಡಿದ ಅಜ್ಜಮ್ಮ ಗಾಬರಿಯಿಂದ ಯಾಕೆ ಹೀಗಾಯಿತು ಎಂದು ವಿಚಾರ ಮಾಡಿದಾಗ ಗುರು ಜಂಗಮ ಸೇವೆಗೆ ಬಂದದ್ದು ಅರಿಗೆ ಬರುತ್ತದೆ ಆಗ ರೇವಣಸಿದ್ದರ ಬಳಿ ಬಂದು ಪರಿಪರಿಯಾಗಿ ಬೇಡಿಕೊಂಡಳು. ಅದರಂತೆ ಮುತ್ತೈದೆಯರ ಮನೆಯವರು ಸಹ ಬೇಡಿಕೊಂಡುರು ಭಕ್ತರ ಕೊರಿಕೆಗೆ ಕರಗಿದ ಗುರು ರೇವಣಸಿದ್ದರು ಮನೆಗೆ ಬರಲು ಒಪ್ಪಿಕೊಂಡರು. ಆಗ ಇಡೀ ಊರಿನ ಜನರೆಲ್ಲರು ತಮ್ಮ ಮನೆಗಳನ್ನು ಸ್ವಚ್ಚ ಮಾಡಿ ಜಂಗಮರ ಸೇವೆ ಮಾಡಿದ್ದರು. ಆಗ ಮುತ್ತೈದೆಯರು ಕೈಗಳಿಗೆ ಚಲನೆ ಬಂದು ಗೊಂಬೆಯ ಸ್ಥಿತಿಯಿಂದ ಮನುಷ್ಯರ ಸ್ಥಿತಿಗೆ ಬಂದರು ಆಗ ಎಲ್ಲರು ಬಂದು ಗುರುಗಳಿಗೆ ನಮಸ್ಕಾರ ಮಾಡಿದರು. ಪ್ರಸಾದವನ್ನು ಸ್ವೀಕರಿಸಿದ ರೇವಣಸಿದ್ದರು ನನಗೆ ಇನ್ನು ಮುಂದೆ ನಿಮ್ಮ ಮನೆಗೆ ಪ್ರಸಾದಕ್ಕೆ ಬರುವುದು ಆಗುವುದಿಲ್ಲ ನೀವೇ ನಾನಿದ್ದ ಗುಡ್ಡಕ್ಕೆ ನಿತ್ಯ ಪ್ರಸಾದ ತಂದು ಕೊಡಬೇಕೆಂದು ಹೇಳಿದಾಗ ಅಜ್ಜಮ್ಮ ಶಿರಸಾವಹಿಸಿ ಒಪ್ಪಿಕೊಂಡು ಮುಂದೆ ನಿತ್ಯ ಪ್ರಸಾದವನ್ನು ಮಗ ಮಲ್ಲಯ್ಯ ಗುರು ಇದ್ದ ಕಡೆಗೆ ತಗೆದುಕೊಂಡು ಹೋಗುತ್ತಿದ್ದ. ಒಂದು ದಿನ ಸೊಸೆಯಾದ ಮಾಳವ್ವನಿಂದ ಗುರುವಿಗೆ ಅಪಚಾರವಾಗುವದು ಮುಂದೆ ಹಾಗೇ ಈ ಕಥೆ ಮುಂದುವರೆಯುತ್ತದೆ. ರೇವಣಸಿದ್ದರು ಎಳುನೂರುವರ್ಷಗಳ ಕಾಲ ಅಜ್ಞಾತವಾಗಿ ಎಳುನೂರು ವರ್ಷಗಳ ಕಾಲ ಬಾಹ್ಯ ಪ್ರಪಂಚದಲ್ಲಿ ಸಂಚರಿಸಿ ಅನೇಕ ಭಕ್ತರ ಕಷ್ಟಗಳನ್ನು ಬಗೆಹರಿಸುತ್ತಾ ಇಂಗಳೇಶ್ವರ ಗವಿಯಲ್ಲಿ ತಪಸ್ಸು ಮಾಡಿದ್ದಾರೆ ಎಂದು ಸ್ಥಳ ಪುರಾಣ ಹೇಳುತ್ತದೆ. ಈ ಸ್ಥಳ ಪುರಾಣವನ್ನು ಬರೆದವರು ಗಂವ್ಹಾರ ಬಸವಲಿಂಗ ಶ್ಯಾಸ್ತ್ರಿಗಳು. ಇಂದಿಗೂ

ಇಂಗಳೇಶ್ವರದಲ್ಲಿ ಒಂದು ತಿಂಗಳು ಕಾಲ ನಿರಂತರವಾಗಿ ರೇವಣಸಿದ್ದರ ಪುರಾಣವನ್ನು ಪಾರಾಯಣ ಮಾಡುತ್ತಾರೆ. ಈ ಪುರಾಣದಲ್ಲಿ ಅಜ್ಜಮ್ಮನ ಕತೆ ಬಂದ ಮೇಲೆಯೇ ಸಜ್ಜನ ಮನೆತನದವರು.ರೇವಣಸಿದ್ದರಿಗೆ ಬಿನ್ನವಿಸಿಕೊಂಡು ಪ್ರಸಾದ ಮಾಡಿಸುವರು.

೧೦

# ಇಂಗಳೇಶ್ವರದಲ್ಲಿಯ ಶರಣರು

# ಬಸವಣ್ಣ, ಚನ್ನಬಸವಣ್ಣ, ಅಕ್ಕನಾಗಮ್ಮ

**ಮಹಾ ಮಾನವತಾವಾದಿ ಬಸವಣ್ಣನವರು :**

ಜಗತ್ತಿಗೆ ಕಾನೂನು ಅರಿವು ಮೂಡಿಸಿ ಸಮಾನತೆ ಸಾರಿ ಮೂಡನಂಬಿಕೆ ಅಳಿಸಿ ಕಾಯಕದಲ್ಲಿ ಕೈಲಾಸ ಕಂಡ ನನಗಿಂತ ಯಾರು ಕಿರಿಯರಿಲ್ಲ, ಶಿವ ಭಕ್ತರಿಗಿಂತ ಹಿರಿಯರಿಲ್ಲ ಎಂದು ಹೇಳಿದ ಅಪ್ರತಿಮ ಅದಮ್ಯ ಕ್ರಾಂತಿಯೋಗಿ ಮಹಾತ್ಮ ಬಸವಣ್ಣನವರಿಗೆ ಯಾರು ಸಾಟಿಯಾಗಲಾರರು ಎಂದು ಹೇಳಬಹುದು. ಅವರು ತಮ್ಮ ವಚನದಲ್ಲಿ ಜಗತ್ತನ್ನು ನಿಬ್ಬೆರಗಾಗಿಸಿದರು.







ಆ ಕಾಲದಲ್ಲಿ ಇಂಗಳೇಶ್ವರ (ಹಿಂದಿನ ತಿಂಗಳೇಶ್ವರ) ಮೊದಲು ಒಂದು ದೊಡ್ಡ ಅಗ್ರಹಾರವಾಗಿತ್ತು. ಇಲ್ಲಿಯ ಮಾದಲಾಂಬಿಕೆ ಎಂಬ ಹೆಣ್ಣು ಮಗಳನ್ನು ಬಾಗೇವಾಡಿಯ ಮಾದರಸ ಎಂಬ ವರನಿಗೆ ಕೊಟ್ಟು ಮದುವೆ ಮಾಡಿಕೊಟ್ಟಿದ್ದರು. ಆ ದಂಪತಿಗಳು ನಂದಿಯ ಆರಾಧಿಸಿದರು, ಆ ನಂದಿಯ ಫಲದಿಂದ ಒಂದು ಕಾಂತಿಯ ತೇಜಸ್ಸು ಹೊಂದಿದ, ಜಗತ್ತಿಗೆ ಬೆಳಕಾಗುವ, ಬಂಗಾರ ವರ್ಣದ ಕಂದನನ್ನು ಹೆತ್ತರು ಆ ಕಂದನೇ ಬಸವಣ್ಣ.

ಶ್ರೀ ಬಸವೇಶ್ವರರು ಅಕ್ಷಯ ತೃತಿಯಾ ೧೧೩೧ ರಲ್ಲಿ ಜನಿಸಿದರು. ಈ ಜನನಕ್ಕೆ ಸಂಬಂಧಿಸಿದ ಹಲವಾರು ಗೊಂದಲಗಳು ಇವೆ. ಸಂಶೋಧಕ ದಿ॥ ಶ್ರೀ ಎಂ ಚಿದಾನಂದ ಮೂರ್ತಿ ಹಾಗೂ ಬಸವ ಸಮಿತಿಯಿಂದ ಪ್ರಕಟವಾದ ಡಾ॥ ಮೃತ್ಯುಂಜಯ ರುಮಾಲೆ ಯವರ ಚೆನ್ನಬಸವಣ್ಣ ಪುಸ್ತಕ (ಪು-೧೧) ಮತ್ತು ಇನ್ನಿತರರು ಸಂಶೋಧಕರು ಇಂಗಳೇಶ್ವರ ಎಂದರೆ. ದಿ॥ ಶ್ರೀ ಎಂ.ಎಂ. ಕಲಬುರ್ಗಿಯವರು ಹಾಗೂ ಇನ್ನಿತರರು ಬಾಗೇವಾಡಿ ಎಂದೂ, ಇನ್ನೂ ಕೆಲ ಜಾನಪದರು ಹೋರಿ ಮಟ್ಟಿಗುಡ್ಡ ಎಂದು ಹೇಳುವರು. ಮಾದಲಾಂಬಿಕೆಯ ತವರು ಇಂಗಳೇಶ್ವರ ಆಗಿದ್ದರಿಂದ ಬಸವಣ್ಣ ಇಂಗಳೇಶ್ವರದಲ್ಲಿಯೇ ಹುಟ್ಟಿದ್ದು ಎಂದು ಕೆಲವರು ಹೇಳುವರು, ಇದ್ದಕ್ಕೆ ವಿರೋಧಿಸುವ ಜನ ಬಸವಣ್ಣನಿಗೆ ಸಂಬಂಧಿಸಿದ ಅರ್ಜುನವಾಡಿ ಶಾಸನ ಮುಂದಿಟ್ಟುಕೊಂಡು ಬಸವಣ್ಣನಿಗೆ ಒಬ್ಬ ಅಣ್ಣ ಇದ್ದ ಅವನ ಹೆಸರು ದೇವರಾಜ ಅದು ಹೇಗೆ ಇಂಗಳೇಶ್ವರದಲ್ಲಿ ಹುಟ್ಟುವನು ಎಂದು ಕೆಲವರ ವಾದ. ಹಾಗೇ ಇನ್ನೊಂದು ವಾದ ಮಾದರಸನಿಗೆ ಇಬ್ಬರು ಹೆಂಡತಿಯರು ಮೊದಲನೆಯ ಮಡದಿಯ ಮಗನೇ ದೇವರಾಜ ಎನ್ನುವ ವಾದವು ಇದೆ. ಇನ್ನೂ ಭೀಮಕವಿಯ ಬಸವ ಪುರಾಣದಲ್ಲಿ ಇಂಗಳೇಶ್ವರ-ಬಾಗೇವಾಡಿ ಎಂದು ಹೇಳುವನು. ಇನ್ನೂ ಇತ್ತೀಚಿಗೆ ಕರ್ನಾಟಕ ಸರ್ಕಾರ ಬಸವಣ್ಣನವರು ಜನಿಸಿದ ಗ್ರಾಮ ಇಂಗಳೇಶ್ವರ ಎಂದು ಅಧಿಕೃತ ಘೋಷಣೆ ಮಾಡಿ ೨೦೦೮ ಇಂಗಳೇಶ್ವರವನ್ನು ಕೂಡಲಸಂಗಮ ಅಭಿವೃದ್ಧಿ ಮಂಡಳಿಗೆ ಸೇರಿಸಿ ಬಸವ ಮಾತಾ ಮಾದಲಾಂಬಿಕೆಯ ಸ್ಮಾರಕವನ್ನು ನಿರ್ಮಿಸಿದರು ನಂತರ ೨೦೨೧ ಮಾರ್ಚನಲ್ಲಿ ಬಸವಣ್ಣನವರ ಜನ್ಮಸ್ಥಳ ಇಂಗಳೇಶ್ವರ ಅಭಿವೃದ್ದಿಗೆ ೫ ಕೋಟಿ ರೂಪಾಯಿಯನ್ನು ಮೀಸಲಿರಿಸಿದ್ದಾರೆ.

ಒಟ್ಟಲ್ಲಿ ಹೇಳುವದಾದರೆ ಜನನಕ್ಕೆ ಸಂಬಂಧಿಸಿದ ಕೆಲ ವಿಷಯಗಳು ಬಹಳ ಗೊಂದಲವನ್ನು ಸೃಷ್ಠಿ ಮಾಡುತ್ತವೆ ಬಸವಣ್ಣನವರು ಹೇಳಿದ ವಚನದ ಹಾಗೇ ಎನ್ನ ಹೊಗಳಿ ಹೊಗಳಿ ಹೊನ್ನ ಶೂಲಕ್ಕೆ ಎರಿಸದಿರಯ್ಯ ಎಂಬಂತೆ

ಇಂಗಳೇಶ್ವರ ಹೊಗಳಿ ನಾವು ಬಾಗೇವಾಡಿ ಹೊಗಳಿ ನೀವು ಜಗಳ ಮಾಡದೇ ಮಾನವ ಜನಾಂಗಕ್ಕೆ ಜಗದಣ್ಣ ನೀಡಿದ ಸಂದೇಶವನ್ನು ಪಾಲಿಸೋಣ.

ಇಂಗಳೇಶ್ವರವು ಬಸವಣ್ಣನ ತಾಯಿ ಮಾದಲಾಂಬಿಕೆಯ ತವರೂರಾಗಿದ್ದರಿಂದ ಬಸವಣ್ಣ ಇಲ್ಲಿ ಕೆಲವು ವರ್ಷಗಳ ಇಲ್ಲಿ ಇದ್ದು ಹಲವಾರು ಪವಾಡವನ್ನು ಮಾಡಿದನೆಂದು ಹಲವಾರು ಹಿರಿಯರು ಹೇಳುತ್ತಾರೆ ಅದರಲ್ಲಿ ಎರಡು ಪವಾಡಗಳು ನಾವು ಇಲ್ಲಿ ಸ್ಮರಿಸೋಣ

## ಬಸವ ಸತ್ತ ಹುಡುಗನ ಮಾತಾಡಿಸಿದ್ದು :

ಬಾಲ್ಯದಲ್ಲಿ ಬಸವಣ್ಣನವರು ಪವಾಡ ಮಾಡಿದ ಕಥೆಗಳನ್ನು ಶತಮಾನ ಕಳೆದರೂ ಇನ್ನೂ ಇಂಗಳೇಶ್ವರದ ಜನ ನೆನಸಿಕೊಳ್ಳುತ್ತಾರೆ. ಇದು ಜನರ ಬಾಯಿಂದ ಬಂದ ಕಥೆ. ಬಸವೇಶ್ವರರು ಬಾಲ್ಯದಲ್ಲಿ ಬಹಳ ತುಂಟ ಹುಡುಗ. ಇವರು ಬೇಸಿಗೆಯ ಬಿಸಿಲಿಗೆ ಅಲೆದಾಡಿ ಹೈರಾಣಾಗಿ ಈಜಾಡಲು ಎಲ್ಲಾ ಗೆಳೆಯರನ್ನು ಕೂಡಿಕೊಂಡು ಹೋದರು. ಹೀಗೆ ಈಜಾಡುವಾಗ ಒಬ್ಬ ಹುಡುಗ ನೀರಿನಲ್ಲಿ ಕೈ ಸೋತು ನೀರಿನಲ್ಲಿ ಮುಳುಗುತ್ತಾನೆ. ಅಲ್ಲಿರುವ ಮಕ್ಕಳು ಬಸವನೇ ಆ ಹುಡುಗನನ್ನು ಮುಳುಗಿಸಿದ ಎಂದು ಹೇಳುತ್ತಾರೆ. ಬಸವಣ್ಣ ಇಲ್ಲಾ ಎಂದರೂ ಕೇಳದ ಆ ಹುಡುಗರು ಓಣಿಯಲ್ಲಿ ಹೋಗಿ ಬಸವಣ್ಣ ಹುಡುಗನನ್ನು ನೀರಿನಲ್ಲಿ ಮುಳುಗಿಸಿದ ಎಂದು ಹೇಳುತ್ತಾರೆ. ಆ ಓಣಿಯವರು ಬಸವನಿಗೆ ಬಾಯಿಗೆ ಬಂದಂತೆ ಬೈಯಲು ಪ್ರಾರಂಭಿಸುತ್ತಾರೆ. ಆಗ ಬಸವನ ನಾ ಮುಳುಗಿಸಿಲ್ಲಾ ಬೇಕಂದ್ರ ಆ ಹುಡುಗನನ್ನು ಕೇಳೋಣ ನಡೆಯಿರಿ ಎಂದಾಗ, ಆ ಮಾತು ಕೇಳಿದ ಜನ ಸಿಟ್ಟಿನೊಳಗೆ ನಗುತ್ತಾ ಸತ್ತ ಹುಡುಗನು ಮಾತಾಡತಾನಾ ? ಎಂದು ಅಪಹಾಸ್ಯ ಮಾಡುತ್ತಾರೆ. ಆಗ ಬಸವಣ್ಣ ಇಲ್ಲಾ ನಾ ಮಾತನಾಡಿಸುತ್ತೇನೆ ಎಂದಾಗ ಆ ಹುಡುಗನ ಮಾತು ಕೇಳಿ ಜನ ಬಾವಿಯ ಕಡೆ ಹೋಗುತ್ತಾರೆ. ಬಸವ ಬಾವಿಯ ದಂಡೆಯ ಮೇಲೆ ನಿಂತು ಏ ಕಲ್ಲಪ್ಪಾ...ಕಲ್ಲಪ್ಪಾ... (ಕಲ್ಪಿತ ಹೆಸರು) ನಾ ನಿನಗ ನೀರಿನಲ್ಲಿ ಮುಳುಗಿಸಿದ್ದೀನಂತ ಎಲ್ಲರೂ ಹೇಳುತ್ತಿದ್ದಾರೆ. ಬಾ ಕಲ್ಲಪ್ಪ ನೀ ಬಂದು ಎಲ್ಲರಿಗೂ ಹೇಳು, ಬಾ ಕಲ್ಲಪ್ಪ ಬಾ ಬಾರೋ! ಕಲ್ಲಪ್ಪ ಬಾ ಎಂದು ಕರೆದಾಗ ನೀರಿನಲ್ಲಿ ಮುಳುಗಿದ್ದ ಆ ಕಲ್ಲಪ್ಪ ಎಂಬ ಹುಡುಗ ನೀರಿನಿಂದ ಮೇಲೆದ್ದು ನಾ ನೀರಿನಲ್ಲಿ ಕೈ ಸೋತು ಮುಳುಗಿದ್ದೇನೆ, ಬಸವನ ತಪ್ಪು ಏನೂ ಇಲ್ಲಾ ಎಂದು ಹೇಳಿ ಮತ್ತೇ ನೀರಿನಲ್ಲಿ ಮುಳುಗಿ ಪ್ರಾಣ ಬಿಡುತ್ತಾನೆ. ಆ ಊರಿನ ಜನ ಎಲ್ಲರೂ ನಿಬ್ಬೆರಗಾಗಿ ಬಸವ ಸಾಮಾನ್ಯ ಹುಡುಗನಲ್ಲಾ ಇವ ಮಹಾನ್ ವ್ಯಕ್ತಿ ಎಂದು ಸತ್ತ ಹುಡುಗನ





ಮಾತಾಡಿಸಿದ ಮಹಾನ್ ಸಿದ್ಧಿಪುರುಷ ಎಂದು ಮಾತಾಡಿಕೊಂಡು ಹೋದರು. ಇಂದಿಗೂ ಆ ಬಾವಿ ಇಂಗಳೇಶ್ವರದಲ್ಲಿ ನಮಗೆ ಕಾಣ ಸಿಗುತ್ತದೆ.

## ಇಂಗಳೇಶ್ವರ ತೊರೆದು– ಹಾಲಬಾವಿ ಸೃಷ್ಟಿಗೆ ಕಾರಣವಾದದ್ದು :

ಕಲ್ಲಪ್ಪನ ಪವಾಡವಾದ ಕೆಲವು ದಿನಗಳಲ್ಲಿ ಬಸವಣ್ಣ ಬಾಗೇವಾಡಿಗೆ ಹೋಗಲು ತಯಾರಾಗುತ್ತಾನೆ.ಆಗ ತಾಯಿ ಮಾದಲಾಂಬಿಕೆ ಬೇಡ ಬಸವ ಇಲ್ಲೆ ಇರು, ನಿನ್ನ ಬಿಟ್ಟು ನನಗೆ ಇರಲು ಆಗುವದಿಲ್ಲ ಇಲ್ಲಮ್ಮ ನಾ ಹೋಗುತ್ತೇನೆ ಎಂದಾಗ ಸಿಟ್ಟಿನಿಂದ ಎರಡೇಟು ಹೊಡೆಯುತ್ತಾಳೆ ಸಿಟ್ಟಿನಿಂದ ಬಸವ ಓಡಲು ಪ್ರಾರಂಭಿಸುತ್ತಾನೆ ಆಗ ಮಾದಲಾಂಬಿಕೆಯು ನಿಲ್ಲೋ ಬಸವ... ನಿಲ್ಲೋ... ಎನ್ನುತ್ತಾ ಬೆನ್ನು ಹತ್ತುತ್ತಾಳೆ ಬಸವ ನಿಲ್ಲದೇ ಇದ್ದಾಗ ಏ ಬಸವ ನಾ ಕೊಟ್ಟ ಎದೆಹಾಲನ್ನು ಕೊಟ್ಟು ಹೋಗೊ ಎಂದಾಗ ಬಸವ ಓಡುವದನ್ನು ಬಿಟ್ಟು ಅಲ್ಲಿಯೇ ನಿಲ್ಲುತ್ತಾನೆ. ತಾಯಿ ಸಂತೋಷಕ್ಕೆ ಪಾರವೇ ಇರಲಿಲ್ಲ. ಬಸವಣ್ಣ ಬಾಗೇವಾಡಿಗೆ ಹೋಗಲು ನಿರ್ಧಾರ ಕೈ ಬಿಟ್ಟ ಎಂದುಕೊಂಡಳು, ಓಡುವಾಗಲೇ ಬಸವಣ್ಣ ಬಾಗೇವಾಡಿಗೆ ಹೋಗಲು ನಿರ್ಧಾರ ಮಾಡಿಯೇ ಬಿಟ್ಟಿದ್ದ. ಆದರೆ ತಾಯಿ ಎದೆಹಾಲನ್ನು ಹೇಗೆ ಕೊಡುವುದು ತಾಯಿಯ ಎದೆ ಹಾಲು ಶ್ರೇಷ್ಠ ಎಂದು ಯೋಚಿಸುತ್ತಿರುವಾಗ ಅಲ್ಲಿಯೇ ಇದ್ದ ಶಿವ ದೇವಾಲಯದಲ್ಲಿ ಶಿವಲಿಂಗದ ಮೇಲೆ ಬಾಯಿಯೊಳಗೆ ಕೈ ಹಾಕಿ ಹಾಲನ್ನು ಲಿಂಗದ ಮೇಲೆ ಕಾರಿಕೊಂಡು(ವಾಂತಿ) ಬಾಗೇವಾಡಿಗೆ ಹೋಗುತ್ತಾನೆ ನಂತರದಲ್ಲಿ ಬರಗಾಲ ಬಂದಾಗ ಶಿವ ಲಿಂಗದ ಕೆಳಗೆ ನೀರಿನ ಅಂಶ ಕಂಡು ಬಂದಾಗ ಶಿವಲಿಂಗವನ್ನು ತಗೆದು ಗುಂಡ ತೆಗೆಯಲಾಗಿ ಅಲ್ಲಿ ನೀರು ತುಂಬಿತ್ತು.ಇದನ್ನರಿತ ಜನ ಆ ಶಿವಲಿಂಗ ತೆಗೆದು ಅಲ್ಲಿ ಬಾವಿ ತೋಡಿದರು.





**ಬಸವಣ್ಣನವರು ಈಜಲು ಹೋದ ಬಾವಿ ಮತ್ತು
ಈ ಶಿವಲಿಂಗದ ಮೇಲೆ ತಾಯಿ ಕೊಟ್ಟ ಹಾಲು ಕಕ್ಕಿಕೊಂಡಿದ್ದು.**

## ಚನ್ನ ಬಸವಣ್ಣ :







ಅವಿರಳ ಜ್ಞಾನಿ, ಷಟ್‌ಸ್ಥಲ್ ಚಕ್ರವರ್ತಿ, ಚಿನ್ಮಯ ಜ್ಞಾನಿ ಹೀಗೆ ಹಲವಾರು ಹೆಸರುಗಳನ್ನು ಕರೆಸಿಕೊಂಡ ಏಕೈಕ ಶರಣ ಎಂದರೆ ಅದು ಚನ್ನ ಬಸವಣ್ಣವರು. ಬಸವಣ್ಣ ಸೇರಿದಂತೆ ಹಲವಾರು ಶರಣರು ಈತನನ್ನು ಅಗ್ರ ಗಣ್ಯ ಶರಣ ಎಂದು ಕರೆದಿದ್ದಾರೆ. ಇವರು ಮಾನವರು ಮುಕ್ತಿ ಮಾರ್ಗದಲ್ಲಿ ನಡೆಯಲು ಬೇಕಾಗುವ ಎಲ್ಲಾ ಬಗೆಯ ಮಜಲುಗಳನ್ನು ತಿಳಿಸಿದರು. ಆದ್ದರಿಂದ ಎಲ್ಲರಲ್ಲೂ ಇವರು ಎದ್ದು ಕಾಣುತ್ತಾರೆ. ಈ ಚನ್ನ ಬಸವಣ್ಣನವರ ಜನನಕ್ಕೆ ಸಂಬಂಧಿಸಿಂತೆ ಹಲವಾರು ಜನರು ಸಂಶೋಧಿಸಲ್ಪಟ್ಟ ಗ್ರಂಥಗಳು ಅನೇಕ ರೀತಿ ಹೇಳುತ್ತವೆ ಆದರೆ ಸಿಂಗಿರಾಜ ಪುರಾಣ–ಸಂಧಿ ೫–ಪದ್ಯದಲ್ಲಿ ಇವನು ಇಂಗಳೇಶ್ವರದಲ್ಲಿ ಜನಿಸಿದ್ದಾನೆ ಎಂಬ ಉಲ್ಲೇಖವಿದೆ ಇವನ ತಂದೆ ಶಿವದೇವ ತಾಯಿ ನಾಗಮ್ಮ ಎಂದು ತಿಳಿಸುತ್ತದೆ. ಇದಕ್ಕೆ ಸಂಬಂಧಿಸಿದಂತೆ ಇನ್ನೊಂದು ಕುರುಹು ಇಂಗಳೇಶ್ವರ ಗ್ರಾಮ ಶ್ರೀ ಅರವಿಂದ ಕುಲಕರ್ಣಿಯವರ ಮನೆಯಲ್ಲಿ ಮೋಡಿ ಲಿಪಿಯಲ್ಲಿ ಇರುವ ತುಂಡು ತುಂಡಾದ ಕಾಗದ ಒಂದು ಒಂದು ಸಿಕ್ಕಿತು. ಅದನ್ನು ವಿರಕ್ತ ಮಠದ ಶ್ರೀ ಮ.ನಿ.ಪ್ರ ಚನ್ನಬಸವ ಮಹಾಸ್ವಾಮಿಗಳ ಬಳಿ ಕೊಟ್ಟರು. ಮುಂದೆ ಅದನ್ನು ಶ್ರೀಗಳ ಅಪೇಕ್ಷಯಂತೆ ವಿದ್ವಾಂಸರು ಅದನ್ನು ಕನ್ನಡ ಅನುವಾದ ಮಾಡಿದರು. ಮುಂದೆ ಈ ಪ್ರತಿಯನ್ನು ಮಾನ್ಯ ಶ್ರೀ ವಿಶ್ವನಾಥ ರೆಡ್ಡಿ ಮುದ್ನಾಳ ಯವರು ಬಸವ ಸಮಿತಿಗೆ ಒದಗಿಸಿದ್ದಾರೆ.

ಮಾನವನು ಅನುಸರಿಸಬೇಕಾದ ಹಲವಾರು ಮಜಲುಗಳನ್ನು ಚನ್ನಬಸವಣ್ಣನವರು ತಿಳಿಸಿದ್ದಾರೆ ಇದರಲ್ಲಿ ಮೊದಲಿಗೆ ಬರುವ ಮಜಲು ಷಟಸ್ಥಲ ಎಂದರೆ ಷಟ್ ಎಂದರೆ ಆರು ಸ್ಥಳಗಳು ಈ ಆರು ಸ್ಥಲಗಳು ಅಂದರೆ ಇವು ವೀರಶೈವ–ಲಿಂಗಾಯತರು ಆಚರಿಸುವ ಆಚರಣೆಗಳು ಈ ಆಚರಣೆಯಿಂದ ವ್ಯಕ್ತಿಯಾದವನ ಆತ್ಮವು ಪರಮಾತ್ಮನ ಕಡೆ ಸಾಗುತ್ತದೆ ಪ್ರತಿಯೊಂದು ಸ್ಥಲವು ಹಲವಾರು ಜ್ಞಾನವನ್ನು ನೀಡುತ್ತಾ ಸಾಗುತ್ತದೆ

೧) ಭಕ್ತಿ ಸ್ಥಲ ೨) ಮಹೇಶ ಸ್ಥಲ ೩) ಪ್ರಸಾದಿ ಸ್ಥಲ ೪) ಪ್ರಾಣ ಲಿಂಗ ಸ್ಥಲ ೫) ಶರಣ ಸ್ಥಲ ೬) ಐಕ್ಯ ಸ್ಥಲ.

೧) ಭಕ್ತಿ ಸ್ಥಲದಲ್ಲಿ ಗುರು ಲಿಂಗ ಜಂಗಮ ಬಗ್ಗೆ ಅರಿವನ್ನು ನೀಡುತ್ತದೆ. ೨) ಮಹೇಶ ಸ್ಥಲ ೩) ಪ್ರಸಾದ ಸ್ಥಲ ಶಿವನು ಸರ್ವ ಜೀವಿಗಳಿಗೆ ಅನ್ನ ನೀರು ಕೊಟ್ಟು ಸಲುಹುವನು ಹಸಿವೆಯಿಂದ ಬಂದ ಭಕ್ತನಿಗೆ ಅನ್ನ ಸಮರ್ಪಣೆ ಮಾಡಿ ಆ ಶಿವನಿಗೆ ಹತ್ತಿರವಾಗುವದು ಈ ಸ್ಥಲದ ಉದ್ದೇಶ ೪) ಪ್ರಾಣ ಸ್ಥಲ ತನ್ನದೇ ಅಂತರಾಳ ಹಾಗೂ ಅಂತರಾತ್ಮಗಳ ಸಂಪೂರ್ಣವಾಗಿ ಅರಿಯುವ ಮಜಲು

ಇದಾಗಿರುತ್ತದೆ. ೫) ಶರಣಸ್ಥಲ ಆತ್ಮ ಪರಮಾತ್ಮನೊಂದಿಗೆ ನೇರ ಸಂವಾದ ಆರಂಭವಾಗುವ ಮಜಲು ಇದು.೬) ಐಕ್ಯ ಸ್ಥಲ ಜೀವಾತ್ಮ ಭೌತಿಕ ದೇಹ ತೊರೆದು ಪರಮಾತ್ಮನಲ್ಲಿ ವಿಲೀನವಾಗುವ ಉಚ್ಚ ಮಜಲು ಇದಾಗಿದೆ.

**ವೀರಶೈವರು ಆಚರಿಸುವ ಪಂಚ ಆಚಾರಗಳು :**

೧) ಶಿವಾಚಾರ ೨) ಲಿಂಗಾಚಾರ ೩) ಸದಾಚಾರ ೪) ಭೃತ್ಯಾಚಾರ ೫) ಗಣಾಚಾರ

**ಅಷ್ಟಾವರಣಗಳು :**

೧) ಗುರು ೨) ಲಿಂಗ ೩) ಜಂಗಮ ೪) ಪಾದೋದಕ ೫) ಪ್ರಸಾದ ೬) ವಿಭೂತಿ ೭) ರುದ್ರಾಕ್ಷಿ ೮) ಮಂತ್ರ ಶಿವಪಂಚಾಕ್ಷರಿ ಮಂತ್ರ

## ಅಕ್ಕ ನಾಗಮ್ಮ :

ಬಸವಣ್ಣ ಜಗತ್ತಿಗೆ ಜ್ಯೋತಿಯಾಗಿ ಬೆಳಗಿರಬಹುದು ಆದರೆ ಈ ಜ್ಯೋತಿಗೆ ಎಣ್ಣೆ ಹಾಗೂ ಬತ್ತಿಯಾಗಿದ್ದು ಅಕ್ಕನಾಗಮ್ಮ. ಅಕ್ಕ ನಾಗಮ್ಮ ಹಾಗೂ ಬಸವಣ್ಣ ಇಬ್ಬರು ಬಾಲ್ಯವನ್ನು ಕಳೆದಿದ್ದು ಈ ಇಂಗಳೇಶ್ವರದಲ್ಲಿಯೇ. ಇಲ್ಲಿಯ ಪ್ರಕೃತಿ ಸೌಂದರ್ಯಕ್ಕೆ ಇವರು ಮಾರು ಹೋಗಿದ್ದರು. ಗುಡ್ಡಗಾಡು ಕಾಡು ಮೇಡನ್ನು ಹಾಗೂ ಎಲ್ಲಾ ಕಡೆಗೆ ಇವರು ಸಂಚಾರ ಮಾಡುತ್ತಿದ್ದರು. ಒಮ್ಮೆ ಇವರು ಸಂಚಾರ ಮಾಡುತ್ತಾ ರೇವಣಸಿದ್ಧರ ಬೆಟ್ಟಕ್ಕೆ ಭೇಟಿ ಮಾಡಿದರು ಅಕ್ಕ ನಾಗಮ್ಮ ಇಲ್ಲಿ ತಪ್ಪಸ್ಸನ್ನು ಮಾಡಬೇಕೆಂದಾಗ ಅಧಿಕಾರದಲ್ಲಿರುವ ಇವರ ಮನೆತನದವರು ಗವಿಯೊಂದನ್ನು ನಿರ್ಮಿಸಿ ಕೊಡುತ್ತಾರೆ.ಆ ಗವಿಗೆ ಅಕ್ಕನಾಗಮ್ಮನ ಗವಿ ಎಂದು ಈಗಲೂ ಕರೆಯುತ್ತಾರೆ. ಮುಂದೆ ಅಕ್ಕ ನಾಗಮ್ಮ ಶಿವದೇವನನ್ನು ಮದುವೆಯಾಗಿ ಕೂಡಲ ಸಂಗಮಕ್ಕೆ ಹೋಗುತ್ತಾರೆ ಬಸವಣ್ಣನು ಸಹ ಸಲ್ಪ ದಿನಗಳ ನಂತರ ಅಕ್ಕನ ಹಿಂದೆ ಕೂಡಲ ಸಂಗಮಕ್ಕೆ ಹೋಗುತ್ತಾನೆ ಅಲ್ಲಿಯೇ ಶಿಕ್ಷಣ ಪಡೆಯುತ್ತಾನೆ. ಸಂಗಮದಿಂದ ಅಕ್ಕನಾಗಮ್ಮ ಬಿಜ್ಜಳನ ಆಸ್ಥಾನಕ್ಕೆ ಹೋಗುವಳು. ಕೆಲ ದಿನಗಳು ಗತಿಸಿದ ನಂತರ ಬಸವಣ್ಣನು ಕೂಡಾ ಬಿಜ್ಜಳ ಆಸ್ಥಾನಕ್ಕೆ ಹೋಗುತ್ತಾನೆ ಅಲ್ಲಿಯ ಮಹಾ ಮನೆಯಲ್ಲಿ ಬಸವಣ್ಣನಿಂದ ಲಿಂಗ ದೀಕ್ಷೆ ಪಡೆದು ಮೊದಲು ಲಿಂಗಾಯತಳಾದವಳು ನಾಗಮ್ಮ.

ಇಲ್ಲಿ ಅವಳು ಶರಣರಿಗೆ ಸತ್ಕಾರವನ್ನು ಮಾಡುತ್ತಾ ತಾನು ವಚನವನ್ನು ಬರೆಯುತ್ತಾ ಎಲ್ಲರಿಂದಲೂ ಅಕ್ಕ ಅನಿಸಿಕೊಂಡಿದ್ದಾಳೆ ಇಂತಹ ಸಂದರ್ಭದಲ್ಲಿ





ಇರುವ ಕಾಲದಲ್ಲಿ ಕಲ್ಯಾಣದಲ್ಲಿ ಬಸವಣ್ಣನಿಂದ ಆದ ಅಂತರ್ಜಾತಿಯ ಮದುವೆಯಿಂದ ಕ್ರಾಂತಿ ಉಂಟಾಗುತ್ತದೆ ಬಸವಣ್ಣ ಕಲ್ಯಾಣ ಕಟುಕರ ಕೇರಿಯಾಗಲಿ ಎಂದು ಶಾಪವಿಟ್ಟು ಸಂಗಮದ ಕಡೆಗೆ ಹೋಗುತ್ತಾನೆ. ಆಗ ಬಿಜ್ಜಳನ ಸೈನಿಕರು ಶರಣರನ್ನು ಅಮಾನುಷವಾಗಿ ದೈಹಿಕ ಹಲ್ಲೆ ಮಾಡಲು ಪ್ರಾರಂಬಿಸುತ್ತಾರೆ. ಶರಣರು ಬರೆದ ಗ್ರಂಥಗಳನ್ನು ಸುಡಲು ಯತ್ನಿಸುತ್ತಾರೆ ಇವುಗಳನ್ನು ಕಾಪಾಡಲು ದಿಟ್ಟತನದಿಂದ ಖಡ್ಗ ಹಿಡಿದು ಹೋರಾಡಿದ ಮಹಿಳೆ ಎಂದರೆ ಅವಳೇ ಅಕ್ಕ ನಾಗಮ್ಮ. ಅವುಗಳನ್ನು ತಂದು ಸುರಕ್ಷವಾಗಿ ಮುಟ್ಟಿಸಿದ್ದರಿಂದಲೇ ವಚನಗಳುನ್ನು ಕಾಣುತ್ತಿದ್ದೇವೆ. ಆಗ ಶರಣರು ಹೇಳಿದ ಆ ವಚನಗಳು ಇಂದಿನ ಶತಮಾನ ಮುಂದಿನ ಶತಮಾನಕ್ಕೆ ಹಾಗೂ ಎಂದೆಂದಿಗೂ ಅವುಗಳ ಸಂದೇಶ ಅಳಿಯದು ಇಂತಹ ವಚನ ಸಾಹಿತ್ಯವನ್ನು ಉಳಿಸಿದ ಶರಣೆಗೆ ನನ್ನ ನೂರೊಂದು ನಮನಗಳು.

ಬೇರೆ ಊರಿನಲ್ಲಿ ರೈತರು ಮುಂಗಾರು ಮಳೆಯಾದಾಗ ಭೂಮಿಯನ್ನು ಬಿತ್ತಲು ಊರಿನ ಗ್ರಾಮ ದೇವರಿಗೆ ಉಡಿ ತುಂಬಿದ ನಂತರ ಕೂರುಗಿ ಸಾಗ (ಬಿತ್ತನೆಯನ್ನು ಪ್ರಾರಂಬಿಸುತ್ತಾರೆ) ಮಾಡುತ್ತಾರೆ ಆದರೆ ನಮ್ಮ ಊರಿನಲ್ಲಿ ನಮ್ಮ ಗ್ರಾಮದ ಹೆಣ್ಣು ಮಗಳಾದ ಅಕ್ಕ ನಾಗಮ್ಮನಿಗೆ ಉಡಿ ತುಂಬಿದ ನಂತರವೇ ಕೂರುಗಿ ಸಾಗ ಮಾಡುತ್ತಾರೆ.



**ಇಂಗಳೇಶವರದಲ್ಲಿ ರೇವಣಸಿದ್ಧರ ಬೆಟ್ಟದ ಪೂರ್ವ ದಿಕ್ಕಿನಲ್ಲಿ ಇರುವ ಅಕ್ಕ ನಾಗಮ್ಮನ ತಪಸ್ಸು ಮಾಡಿದ ಗವಿ**



# ೧೧

# ಇಂಗಳೇಶ್ವರದಲ್ಲಿಯ ಪೂರ್ವ ಕಾಲದ ಕವಿಗಳು

## ಅಗ್ಗಳ ಕವಿ :



ಕರ್ನಾಟಕ ಸಾಹಿತ್ಯ ರತ್ನವನ್ನು ಬೆಳಗಿದವರಲ್ಲಿ ಮೊದಲಿಗೆ ಜೈನ ಕವಿಗಳೆಂದು ಎಲ್ಲಾ ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಜೈನ ಕವಿಗಳಾದ ಪಂಪ,ಪೊನ್ನ, ರನ್ನ,. ಇವರ ತರುವಾಯ ಪೂರ್ವ ಕವಿಗಳಲ್ಲಿ ನಮ್ಮ ಇಂಗಳೇಶ್ವರದಲ್ಲಿ ಹುಟ್ಟಿರುವ ಅಗ್ಗಳ ಕವಿಯು ಒಬ್ಬ. ಈತನ ತಂದೆ ಶಾಂತೀಶ ತಾಯಿ ವಾಚಾಂಬಿಕೆಯ ಉದರದಲ್ಲಿ ಸುಮಾರು ೧೧೮೯ರಲ್ಲಿ ಜನಿಸಿದ. ಈತನ ಗುರು ತ್ರೈವಿದ್ಯಶ್ರುತಕೀರ್ತಿದೇವ ಕವಿಯಾದ ಈತ "ರೂಪಸ್ತವನಮಣಿಪ್ರವಾಳ" ಎಂಬ ಗ್ರಂಥವನ್ನು ರಚಿಸಿದ್ದನೆಂದು ಪಾರ್ಶ್ವಕವಿಯಿಂದ ತಿಳಿಯುತ್ತದೆ ಆದರೆ ಈ ಕೃತಿ ಲಭ್ಯವಿಲ್ಲ. ಇವನ ಲಭ್ಯವಿರುವ ಕೃತಿ ಎಂದರೆ "ಚಂದ್ರಪ್ರಭ" ಈ ಚಂದ್ರಪ್ರಭ ಯಾರು ಎಂದು ನೋಡಿದರೆ ಈತ ಇಕ್ಷ್ವಾಕು ವಂಶದ ಮಹಸೇನ ಲಕ್ಷ್ಮಣದೇವಿಯವರ ಮಗ. ರಾಣಿ ಗರ್ಭವತಿಯಾಗಿದ್ದಾಗ ಒಂದು ದಿನ ಪೂರ್ಣ ಚಂದ್ರನ ತೇಜಸ್ಸನ್ನು ನೋಡುತ್ತಾ ನಿಂತಿದ್ದಳು ಇದ್ದಕ್ಕಿದ್ದಂತೆ ಅವಳಿಗೆ ಚಂದ್ರನು ಬೀರುವ ತಂಪುಕಾಂತಿಯ ಕಿರಣವನ್ನು ಸವಿಯುವ ಇಚ್ಛೆಯಾಯಿತು. ರಾಜ ಈಕೆಯ ಬಸರಿ ಬಯಕೆಯನ್ನು ಚಾಣಾಕ್ಷತನದಿಂದ ಪೂರ್ಣಗೊಳಿಸಿದನು. ಪುಷ್ಯ ಮಾಸದ ೧೩ ನೇಯ ದಿನದಂದು ರಾಣಿಯು ಗಂಡುಮಗುವಿಗೆ ಜನ್ಮಕೊಟ್ಟಳು. ಮಗು ಚಂದ್ರನಂತೆ ತೇಜಸ್ವಿಯಾಗಿತ್ತು ಆದ್ದರಿಂದ ಆ ಮಗುವಿಗೆ ಚಂದ್ರಪ್ರಭ ಎಂದು ಹೆಸರಿಟ್ಟರು. ಈ ಚಂದ್ರಪ್ರಭ ಲೌಕಿಕ ಆನಂದಗಳಾಗಲಿ ಅಥವಾ ರಾಜ ವೈಭವಗಳಲ್ಲಿ ಆಸಕ್ತಿ ಇರಲಿಲ್ಲ





ಸಿಂಹಾಸನವನ್ನೇರಿದರು ಮನದಲ್ಲಿ ಏನೋ ಒಂದು ಕೊರಗು ಆದ್ದರಿಂದ ಇವನು ಯವ್ವನದಲ್ಲಿಯೇ ಸ್ವಯಂ ಮುನಿದೀಕ್ಷೆ ಪಡೆದು ಕೇವಲ ಮೂರು ತಿಂಗಳ ತಪಸ್ಸಿನಿಂದಲೇ ಸರ್ವಜ್ಞನಾದನು ನಿಜ ಧರ್ಮದ ಪ್ರಚಾರ ಮಾಡಿ ನಂತರ ತಿಂಗಳ ಉಪವಾಸ ಮಾಡಿ ನಿರ್ವಾಣ ಹೊಂದಿದರು.

ಕನ್ನಡ ಸಂಸ್ಕೃತ ಎರಡು ಭಾಷೆಯ ಪಾಂಡಿತ್ಯವನ್ನು ಹೊಂದಿದ ಅಗ್ಗಳ, ಎಂಟನೆಯ ತೀರ್ಥಂಕರನಾದ "ಚಂದ್ರಪ್ರಭನ ಚರಿತೆ" ಎಂಬ ಗ್ರಂಥವನ್ನು ರಚಿಸುವಾಗ ಮೊದಲು ಚಂದ್ರಪ್ರಭನನ್ನು ಸ್ತುತಿಸಿ ನಂತರ ಸಿದ್ಧಾದಿಗಳನ್ನು, ಪಂಚಗುರುಗಳನ್ನು, ಜಿನ ಧರ್ಮವನ್ನು ಯಕ್ಷ–ಯಕ್ಷಿನಿಯರನ್ನು, ಸರಸ್ವತಿಯನ್ನು, ಅನಂತರ ಅನುಬದ್ಧಕೇವಲಿಗಳಿಂದ ಶ್ರುತಕೀರ್ತಿಯ ತನಕ ತನ್ನ ಗುರುಪರಂಪರೆಯನ್ನು ಹೇಳಿಕೊಂಡಿದ್ದಾನೆ. ಈ ಚಂದ್ರಪ್ರಭ ಗ್ರಂಥ ಹದಿನಾರು ಆಶ್ವಾಸಗಳುಳ್ಳ ಚಂಪೂ ಗ್ರಂಥ ಇವನ ಚಂದ್ರಪ್ರಭ ಪುರಾಣವನ್ನು ಓದಿ ಅದರಲ್ಲಿಯ ಕಾವ್ಯ ಶಕ್ತಿಯನ್ನು ನೋಡಿ ಕವಿಗಳಾದ ದೇವಕವಿ ಆಂಡಯ್ಯ, ಕಮಲಭವ, ಬಾಹುಬಲಿ, ಪಾರ್ಶ್ವಕವಿ ಅಗ್ಗಳ ಕುರಿತು ಹೊಗಳಿಕೆಯ ಮಾತನಾಡಿದ್ದಾರೆ

ಈ ಚಂದ್ರಪ್ರಭ ಸಾಂಗತ್ಯವನ್ನು ಬರೆದ ದೊಡ್ಡಯ್ಯ ಹಾಗೂ ಷಟ್ಪದಿಯನ್ನು ಬರೆದ ದೊಡ್ಡಣಾಂಕ ಇವನ ಗ್ರಂಥದಿಂದ ಉಪಕೃತರಾದಂತೆ ಕಂಡುಬರುತ್ತದೆ. ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವ ಮತ್ತು ಅಭಿನವವಾದಿ ವಿದ್ಯಾನಂದನ ಕಾವ್ಯಸಾರಗಳಲ್ಲಿ ಇವನ ಕಾವ್ಯದ ಸಂಕಲನಗೊಂಡಿವೆ. ಹದಿನಾರನೇಯ ಶತಮಾನದ ಜೈನ ಕವಿ ರತ್ನಾಕರ ಸಹ ಅಗ್ಗಳ ಕವಿಯ ಗ್ರಂಥದ ಕೆಲವು ಅಂಶವನ್ನು ಬಳಸಿಕೊಂಡಿದ್ದ. ಎಂದು ತಿಳಿದು ಬರುತ್ತದೆ ಇದರಿಂದ ಈ ಕವಿಯ ಶಕ್ತಿ ಎಷ್ಟು ಇತ್ತು ಎಂದು ತಿಳಿದು ಬರುತ್ತದೆ.

# ೧೨

# ಇಂಗಳೇಶ್ವರದಲ್ಲಿಯ ಪವಾಡ ಪುರುಷರು

## ಅ) ಶ್ರೀ ಸಿದ್ದಲಿಂಗ ಮುತ್ಯಾರು :

೧) ಕರಿ ಕುದರಿ ಕಾಲಾಗ, ಕಟ್ಟದ ಗಗ್ಗರಿ ಹಾಕಿ
ಮಠದಾಗ ಪೇರಿ ತಿರವ್ಯಾನೋ.
ಮಠದಾಗ ಪೇರಿ ತಿರವ್ಯಾನೋ ಸಿದ್ದಲಿಂಗ ಸ್ವಾಮೀ
ಮಾಯಾಗಿ ಹೋಗ್ಯಾನೋ ಮರತೇಕ.

೧) ಮಠ ನೋಡು ಮಠ ನೋಡು
ಮಠದ ಬಾಗಿಲ ನೋಡು
ಕಟದ ರುದ್ರಾಕ್ಷಿ ಕದ ನೋಡೋ
ಕಟದ ರುದ್ರಾಕ್ಷಿ ಕದ ನೋಡೋ ಚನ್ನಬಸವ ಸ್ವಾಮಿ
ವಚನ ಬರದಾರ ಓದಿ ಹೇಳೋ,

ಇದು ಜಾನಪದದಲ್ಲಿ ಬರುವ ಹಾಡು ಇಲ್ಲಿ ಶ್ರೀ ಸಿದ್ದಲಿಂಗ ಸ್ವಾಮಿಜೀ ಹಾಗೂ ಚನ್ನ ಬಸವ ಸ್ವಾಮಿಯವರು ಕುರಿತು ಹಾಡು. ಇಂತಹ ಶ್ರೀ ಸಿದ್ದಲಿಂಗ ಮುತ್ಯಾರು ಇಂಗಳೇಶ್ವರದಲ್ಲಿ ವಿರಕ್ತಮಠ ಕಾಮದೇನು ಕಲ್ಪವೃಕ್ಷದಂತೆ ಇದ್ದವರು. ಅವರು ಬೇಡಿದವರಿಗೆ ಬೈದು ಬಯಸಿದ್ದನ್ನು ಎಲ್ಲವನ್ನು ಕೊಟ್ಟ ಕೀರ್ತಿ ಮಹಾಜ್ಞಾನಿ ಸಿದ್ದಲಿಂಗ ಮುತ್ಯಾರಿಗೆ ಸಲ್ಲುತ್ತದೆ. ಶ್ರೀಗಳು ಊರಿಗೆ ಬರುವದಕ್ಕಿಂತ ಮೊದಲು ಊರಿನ ಸುತ್ತೆಲ್ಲ ಮುಳಗೋಳ ಪಟ್ಟಿಯಿಂದ (ಪಾಪಸಕಳ್ಳಿ) ಸುತ್ತುವರೆದಿತ್ತು ಆಗ ಮುತ್ಯಾರು ಬಂದು ಒಂದು ಹುಳವನ್ನು ಬಿಟ್ಟರು ಆ ಹುಳು ಈ ಎಲ್ಲಾ ಮುಳಗೋಳ ಮುಳ್ಳನ್ನು ನಾಶ ಮಾಡಿತು. ಇದರಿಂದ ಊರು ಸುಂದರವಾಗಿ ಕಾಣಹತ್ತಿತು.ಮಕ್ಕಳಿಲ್ಲದವರಿಗೆ ಮಕ್ಕಳನ್ನು, ದೆವ್ವ ಹಿಡಿದವರಿಗೆ ದೆವ್ವ ಬಿಡಿಸಿ, ಬಡತನದಲ್ಲಿರುವ ಭಕ್ತರಿಗೆ ಸಿರಿತನ ನೀಡಿ ಗ್ರಾಮವನ್ನು ಉದ್ಧರಿಸಿದ್ದರು. ಶ್ರೀಗಳು ಇಂಗಳೇಶ್ವರಲ್ಲಿ ೬೩ ಮಂಟಪ ಪೂಜೆಯನ್ನು ಮಾಡಲು ಪ್ರಾರಂಬಿಸಿದಾಗ ಸ್ವಾಮೀಜಿಯವರಿಗೆ ಹಣದ ಕೊರತೆ ಬಹಳ ಇತ್ತು ಆದರು ೬೩ ಮಂಟಪ ಪೂಜೆ ಮಾಡಲೇ ಬೇಕು ಎಂಬ ಅವರ ಮನದ ಬಯಕೆಯಾಗಿತ್ತು. ಅದರಂತೆ ಹಲವಾರು ಸ್ವಾಮೀಜಿಯವರನ್ನು





ಪೂಜೆಗೆ ಕರೆಸಿಕೊಂಡರು. ಹೀಗೆ ಬಂದವರಲ್ಲಿ ಇಬ್ಬರು ಸ್ವಾಮೀಜಿಗಳು ಅವರು ನಿತ್ಯ ಕರ್ಮಕ್ಕೆ ಹೋದಾಗ ಗುರುಗಳು ಬಳಿ ಹಣವಿಲ್ಲ ಅವರು ಹೇಗೆ ಪೂಜೆಯನ್ನು ಮಾಡಿಸುವರು ಎಂದು ಮಾತಾಡಿಕೊಂಡರು ಅವರು ಮಾತನಾಡಿದನ್ನು ಶ್ರೀ ಸಿದ್ದಲಿಂಗ ಅಪ್ಪಗೋಳು ಅವರು ತಮ್ಮ ಜ್ಞಾನ ದೃಷ್ಠಿಯಿಂದ ಕೇಳಿ ಆ ಸ್ವಾಮೀಜಿಗಳು ಬಂದ ನಂತರ ಯಪ್ಪ ನೀವು ಈ ತರ ಮಾತಾಡಿರಿ ನಾನು ಪೂಜೆಯನ್ನು ಮುಗಿಸುತ್ತೇನೆ ಎಂದಾಗ ಆ ಸ್ವಾಮಿಗಳಿಗೆ ಗಾಬರಿಯಾಗಿತು. ನಾವು ಅಲ್ಲಿ ಮಾತನಾಡಿದ್ದು ಅಪ್ಪಾವರಿಗೆ ಹೇಗೆ ಗೊತ್ತಾಯಿತು ಎಂದು ತಮ್ಮ ಮನದಲ್ಲಿಯೇ ಪ್ರಶ್ನೆಯನ್ನು ಹಾಕಿಕೊಳುತ್ತಾ ನಿಂತರು. ಮುಂದೆ ಯಾರ್ಯಾರೋ ಎನೆನೋ ಕೊಟ್ಟರು ಅಪ್ಪಗೋಳು ಅಂದುಕೊಂಡಂತೆ ಪೂಜೆಯನ್ನು ಮಾಡಿ ಮುಗಿಸಿದರು ಇದು ಅಲ್ಲದೆ ಎಲ್ಲಾ ಸ್ವಾಮಿಗಳಿಗೆ ಆಕಳನ್ನು ಅಷ್ಟೇ ಅಲ್ಲ ಕರುವನ್ನು ಸಹ ದಾನ ಮಾಡಿದರು. ಶ್ರೀಗಳು ಇಡೀ ಊರಿಗೆ ಸಂಜೀವಿನಿಯಾಗಿದ್ದರು. ಮುಂದೆ ಇವರು ೧೯೪೪ ರಲ್ಲಿ ಲಿಂಗೈಕ್ಯವಾದಾಗ ಇಡೀ ಊರೇ ದುಖಃ ತೃಪ್ತರಾದರಾಗಿದ್ದರು. ಬೇರೆ ಊರಿಗೆ ಹೋದ ನಮ್ಮೂರಿನವರಿಗೆ ಮುದ್ದೇಬಿಹಾಳದ ಕಡೆ ಮುತ್ಯಾರು ಭೇಟಿಯಾದರು ನಿಮ್ಮ ಊರಿನಲ್ಲಿ ಜಾತ್ರಿ ನಡದೈತಿ ಹೋಗು ಅಂದರು ಅವರು ಬರುವಷ್ಟರಲ್ಲಿ ಮುತ್ಯಾರು ಲಿಂಗದಾಗ ಆದ ವಿಷಯ ತಿಳಿದ ಅವರು ಇಲ್ಲ ಮುತ್ಯಾರು ನನಗೆ ಮುದ್ದೇಬಿಹಾಳದಲ್ಲಿ ಭೇಟಿಯಾಗಿ ನಿಮ್ಮ ಊರಿನಲ್ಲಿ ಜಾತ್ರೆ ನಡೆದಿದೆ ಎಂದು ಹೇಳಿದ್ದಾರೆ ಅದು ಹೇಗೆ ಎಂದು ಅವರು ಗಾಬರಿಯಾಗಿ ಊರ ಮಂದಿಯ ಮುಂದೆ ಹೇಳಿದರು ಇಂತಹ ಪವಾಡ ಪುರುಷ ನಮ್ಮೂರಿನ ಕೀರ್ತಿ ಪುರುಷ ಶ್ರೀ ಸಿದ್ಧಲಿಂಗ ಮುತ್ಯಾರವರದು.

ಅದರಂತೆ ಸಿದ್ದಲಿಂಗೇಶ್ವರನ ಕೃಪಾಶೀರ್ವಾದದಿಂದ ಈ ಸದ್ಯ ಪರಮ ಪೂಜ್ಯ ಮ.ನಿ.ಪ್ರ ಚನ್ನಬಸವ ಶ್ರೀ ಗಳು ಶ್ರೀ ಮಠಕ್ಕೆ ಊತ್ತರಾಧಿಕಾರಿಯಾಗಿ ಬಂದರು. ಮಹಾತಪೋನಿಷ್ಠರು, ವಾಗ್ಮಿಗಳಾದ ಶ್ರೀಗಳು ಒಮ್ಮೆ ಪ್ರವಾಸಕ್ಕೆ ಹೋದಾದ ಅಲ್ಲಿ ಕಲ್ಲಿನಲ್ಲಿ ಕೆತ್ತಿದ ಶ್ಲೋಕ್ ನೋಡಿದ ಅವರು ನಾವು ಯಾಕೆ ಶರಣರ ವಚನಗಳನ್ನು ಕೆತ್ತಸಬಾರದು ಎಂದು ವಿಚಾರ ಮಾಡಹತ್ತಿದರು ಕಲ್ಲಿನಲ್ಲಿ ಕೆತ್ತಿದ ವಚನಗಳು ಎಂದು ಅಳಿಸುವದಿಲ್ಲ ಎಂದು ತಿಳಿದು ಇಂಗಳೇಶ್ವರದಲ್ಲಿ ವಚನ ಶಿಲಾಮಂಟಪಕ್ಕೆ ನಾಂದಿ ಹಾಡಿದರು ಇಲ್ಲಿ ಅವರು ಮಹಾತ್ಮ ಬಸವೇಶ್ವರರ ೧೩೦೦ ವಚನ ವೈರಾಗ್ಯನಿಧಿ ಅಲ್ಲಮಪ್ರಭುವಿನ ೧೦೦ ವಚನ, ಅವಿರಳಜ್ಞಾನಿ ಚನ್ನಬಸವಣ್ಣನವರ ೧೦೦ ವಚನ, ಕರ್ಮಯೋಗಿ ಸೊನ್ನಲಗಿಯ ಸಿದ್ದರಾಮರ ೧೦೦ ವಚನ, ವೀರ ವಿರಾಗಿಣಿ

ಅಕ್ಕಮಹಾದೇವಿಯ ೧೦೦ ವಚನ ಒಟ್ಟು ೧೭೦೦ ವಚನವನ್ನು ಕಲ್ಲಿನಿಂದ ಕೆತ್ತಿದ್ದಾರೆ ೧,೮೧೦೦೦ ಕ್ಕೂ ಅಧಿಕ ಅಕ್ಷರಗಳು ಇವೆ. ಇದು ಪ್ರವಾಸಿಗರನ್ನು ಕೈ ಮಾಡಿ ಕರೆಯುತ್ತದೆ ಹಾಗೆ ಬಂದವರು ಮೂಗಿನ ಮೇಲೆ ಬೆರಳು ಇಟ್ಟು ಕೊಂಡು ನೋಡುವ ಹಾಗೆ ಆಗಿದೆ. ಮುತ್ಯಾರ ಈಗಿನ ಉತ್ತರಾಧಿಕಾರಿಯಾಗಿ ಡಾ॥ ಸಿದ್ದಲಿಂಗ ಶ್ರೀಗಳನ್ನು ಮಾಡಿಕೊಂಡಿದ್ದಾರೆ. ಪೂಜ್ಯ ಸಿದ್ದಲಿಂಗ ಶೀಗಳು ಇಂಗಳೇಶ್ವರಲ್ಲಿಯ ವಿದ್ಯಾರ್ಥಿಗಳು ಅಷ್ಟೇ ಅಲ್ಲದೇ ಸುತ್ತ ನಾಡಿನ ವಿದ್ಯಾರ್ಥಿಗಳಿಗೆ ಅಕ್ಷರವನ್ನು ಉಣಬಡಿಸಿ ಜ್ಞಾನ ಹಸಿವು ನೀಗಿಸಿದ್ದಾರೆ. ಇಂಗಳೇಶ್ವರದ ವಿರಕ್ತಮಠಕ್ಕೆ. ನಿತ್ಯ ದಾಸೋಹ ಶರಣರ ಮನ ತಣಿಸಿದೆ.

**ಹಿರೇಮಠ :**



ಜನರ ನಾಡಿ ಮಿಡಿತ ಅರಿತ ಮಠವಿದು, ಇದು ಊರಿನ ಮಧ್ಯವಿರುವ ಚಾವಡಿಯ ಬಳಿ ಇದೆ ಇದಕ್ಕೆ ಹಿರೇಮಠ ಹಾಗೂ ಒಳಗಿನ ಮಠ ಎಂದು ಕರೆಯುತ್ತಾರೆ ಪೂಜ್ಯ ಬೃಂಗೀಶ್ವರ ಶಿವಾಚಾರ್ಯರು ಶ್ರೀ ಮಠವು ಹಾಗೂ ಇಂಗಳೇಶ್ವರ ಕೀರ್ತಿಯನ್ನು ಅಜರಾಮರವಾಗುವಂತೆ ಮಾಡಿದ್ದಾರೆ ಶ್ರೀಮಠವು ಶ್ರೀಮದ್ ರಂಭಾಪುರಿ ಮಠದ ಶಾಖಾ ಮಠವಾಗಿದೆ ಶ್ರೀ ಮಠವನ್ನು ಪೂಜ್ಯರು – ಭಕ್ತರು ಜೊತೆಗೂಡಿ ಭವ್ಯವಾಗಿ ನಿರ್ಮಿಸಿದ್ದಾರೆ ಮಠದಲ್ಲಿ ಶ್ರೀ ರೇಣುಕಾಚಾರ್ಯರ ಮೂರ್ತಿ ಹಾಗೂ ಶಿವ ಬಸವ ಶಿವಾಚಾರ್ಯರ ಮೂರ್ತಿಗಳು ಪ್ರವಾಸಿಗರ ಕಣ್ಮನ ಸೆಳೆಯುವಂತಿವೆ.ಶ್ರೀಗಳು ಮೌನಯೋಗಿಗಳು ಹಾಗೂ ತಪೋ ನಿಷ್ಠರಾಗಿದ್ದಾರೆ. ೨೦೧೯ ರಲ್ಲಿ ರಂಭಾಪುರಿ ಜಗದ್ಗುರು ವೀರ ಸೋಮೇಶ್ವರರನ್ನು ಕರೆಸಿಕೊಂಡು ಮಠವನ್ನು ಲೋಕಾರ್ಪಣೆ ಮಾಡಿ ಜನರಿಗೆ





ವೀರ ಸೋಮೇಶ್ವರರ ದರ್ಶನ ಭಾಗ್ಯವನ್ನು ನೀಡಿದ್ದಾರೆ ಶ್ರೀಗಳು ಜನರಿಗೆ ಹಲವಾರು ಸಹಾಯವನ್ನು ಮಾಡಿದ್ದಾರೆ.

**ಬ) ಭೀಮರಾಯ ಮುತ್ಯಾರು :**

ಶ್ರೀ ಭೀಮರಾಯ ಮುತ್ಯಾರವರು ಮುಸ್ಲಿಂ ದೇವರನ್ನು ಆರಾಧಿಸುತ್ತಿದ್ದರು. ಮುಸ್ಲಿಂ ಹಬ್ಬದಲ್ಲಿ ಪಂಜಿಯನ್ನು ಹಿಡಿಯುತ್ತಿದ್ದರು ಇವರು ಜನ ಸಾಮಾನ್ಯರಂತೆ ಎಲ್ಲರ ಹೊಲಕ್ಕೆ ಕೆಲಸಕ್ಕೆ ಹೋಗುತ್ತಿದ್ದರು ಒಮ್ಮೆ ಊರಿನ ಹಿರಿಯರು ಪರೀಕ್ಷೆ ಮಾಡಬೇಕೆಂದು ಹೊಲಕ್ಕೆ ಎಡಿಗೆ ಕರೆದುಕೊಂಡು ಹೋಗಿ ಅವರಿಗೆ ಊಟ ಮಾಡು ಎನ್ನಲ್ಲಿಲ್ಲ. ಅವರು ಸಹ ಊಟ ಮಾಡುತ್ತೇನೆ ಎಂದು ಅನ್ನಲ್ಲಿಲ್ಲ. ಅಷ್ಟೊಂದು ಕಠಿಣ ವೃತದ ಮುತ್ಯಾರು. ಅಂದು ವೇಳೆ ಬಹಳವಾದಾಗ ಎತ್ತುಗಳಿಗೆ ನೀರು ಕುಡಿಸಲು ಹಳ್ಳಕ್ಕೆ ಹೊಲದ ಮಾಲೀಕ ಹೋಗುತ್ತಾನೆ. ನೀರು ಕುಡಿಸುವಾಗ ನೀರಿನ ತಥ್ರಾಣಗಿ ಬಿಟ್ಟು ಬಂದಿದ್ದಾ ಎತ್ತಿಗೆ ನೀರು ಕುಡಿಸಿ ಮರಳಿ ಹೋದಾಗ ಅಲ್ಲಿ ನೀರು ಇರಲಿಲ್ಲ. ಅವನು ಬಂದು ಅಣ್ಣ ಎತ್ತಿಗೆ ನೀರು ಕುಡಿಸಲು ಹೋದಾಗ ನೀರು ಇದ್ದವು ಈಗ ಇಲ್ಲ ಎಂದ. ಆ ಭೀಮರಾಯ ಮುತ್ಯಾರು ಈಗ ಹೋಗಪ್ಪ ನೀರು ಅದಾವು ಎಂದರಂತೆ ಮರಳಿ ಹೋದಾಗ ಅಲ್ಲಿ ನೀರು ಇದ್ದವಂತೆ. ಇಂಥಹ ಪವಾಡವನ್ನು ಮಾಡಿದ್ದಾರೆ. ಕಾಯಕ ಮಾಡಿದ ನಂತರ ಪಗಾರವನ್ನು ಕೇಳಲು ಹೋಗುತ್ತಿರಲಿಲ್ಲ. ಒಮ್ಮೆ ಮಳೆ ಸರಿಯಾಗಿ ಆಗದಿದ್ದಾಗ ಜನ ಭೀಮರಾಯ ಮುತ್ಯಾರ ಬಳಿ ಬಂದು ಮಳೆಯೇ ಹೋಯ್ತು ಯಾವಾಗ ಬರುತ್ತದೆ ಎಂದು ಕೇಳಲು ಬರುತ್ತಾರೆ ಆಗ ಮಕಾನದಲ್ಲಿ ನಬೀಸಾಬ ಮತ್ತು ಭೀಮರಾಯ ಮುತ್ಯಾರು ಕುಳಿತುಕೊಂಡಿರುತ್ತಾರೆ ಆಗ ಅಲ್ಲಿಗೆ ಬಂದ ಜನ ಮುತ್ಯಾರಾ ಮಳಿ ಹೋಗೈತಿ ನೀವು ಮಳಿ ತರಿಸಿ ಎಂದು ಮುತ್ಯಾರ ಜೊತೆ ಹುಜುತಿ ಹಾಕುವರು ಆಗ ನಬೀಸಾಹೇಬರು ನಿನ್ನ ಬೆನ್ನಹಿಂದೆ ನಾ ಇದ್ದೇನೆ ಎಂದಾರು. ಮುತ್ಯಾರು ಸುತ್ತೆಲ್ಲ ನೋಡಿದರೆ ಬರಿ ನೀಲಿ ಮೋಡ ಕಾಣುತ್ತಿತ್ತು ಆಗ ಅವರು ಅಗಸಿಯಲ್ಲಿ ಒಂಟಿಗಾಲಿನಲ್ಲಿನಿಂತು ತಮ್ಮ ಬೆತ್ತದಲ್ಲಿ ತಮ್ಮ ಕಾಲಿಗೆ ತಾವೇ ಹೊಡೆದುಕೊಂಡಾಗ ಮೊಡವಾಗತೊಡಗಿತು ಮೂರನೇ ಭಾರಿ ಹೊಡೆದುಕೊಂಡಾಗ ಗುಡುಗು ಸಹಿತ ಭಾರಿ ಮಳೆ ಬಂದಿತು ಇಂತಹ ಪವಾಡ ಮಾಡಿದರಂತೆ ಆದ್ದರಿಂದಲೇ ಇವರನ್ನು ಮಳೆಯ ದೇವರು ಎಂದು ಕರೆಯುತ್ತಾರೆ.

ಮಳೆ ಸರಿಯಾದ ಸಮಯದಲ್ಲಿ ಆಗದಿದ್ದಾಗ ಶ್ರೀ ಭೀಮರಾಯ ಮುತ್ಯಾಗ ಐದು ವಾರ ಹಿಡಿಯುತ್ತಾರೆ ಹೀಗೆ ವಾರ ಹಿಡಿದರೆ (ವಾರ ಎಂದರೆ ಪ್ರತಿ ಶುಕ್ರವಾರ ಮತ್ತು ಮಂಗಳವಾರ ಊರಿನಲ್ಲಿ ಯಾರು ರೊಟ್ಟಿ ಮಾಡುವ ಹಾಗಿಲ್ಲ ಹಾಗೂ ಬಿತ್ತುವದು-ಹರಗುವದು ಮಾಡುವದಿಲ್ಲ) ಒಂದು ವಾರದೊಳಗೆ ಮಳೆಯಾಗುತ್ತದೆ. ವಾಡಿಕೆ ಇದೆ

ಗುರು ಲಾಲ್‌ಸಾಹೇಬ ಅಲಿ ಅವರ ಪಂಜಿಯನ್ನು ಭೀಮರಾಯ ಮುತ್ಯಾರು ಹಿಡಿಯುತ್ತಿದ್ದರು. ಮುಂದೆ ಈ ಪಂಜಿಯನ್ನು ಬೆನಕಪ್ಪ ಮುತ್ಯಾ ಹಿಡಿದರು ನಂತರ ಎಮ್ಮಿ ಸಂಗಪ್ಪ ಮುತ್ಯಾರು ಆಮೇಲೆ ಗಂಗೂರ ಹಣಮಂತ ಮುತ್ಯಾ ಹಿಡಿದರು ಮುಂದೆ ಹೀಗೆ ಸಾಗುತ್ತದೆ.

### ಕ) ಕಳ್ಳಿಗುಡ್ಡಿ ಶರಣರು :



ಶ್ರೀ ಭೀಮರಾಯ ಕಳ್ಳಿಗುಡ್ಡಿ ಇವರು ಶರಣ ಮುತ್ಯಾ ಎಂದೇ ಪ್ರಸಿದ್ಧರಾದವರು. ಇವರು ಒಮ್ಮೆ ರೇವಣಸಿದ್ದರ ಬೆಟ್ಟಕ್ಕೆ ಹೋಗುವಾಗ ಇವರಿಗೆ ಒಬ್ಬ ಸಾಧು ಕರೆದು ತಮ್ಮಾ... ಈ ಕಲ್ಲ ಎತ್ತು ಎಂದು ಆಜ್ಞೆಯನ್ನು ಮಾಡಿದಾಗ ಸರಿ ಎಂದು ಭೀಮರಾಯ ಮುತ್ಯಾ ಆ ಕಲ್ಲನ್ನು ಎತ್ತಿದಾಗ ಅದರ ಕೆಳಗೆ ಒಂದು ಪುಸ್ತಕ ಹಾಗೂ ಒಂದು ಬೆಳ್ಳಿಯ ತಾಟ ಕಂಡಿತು ! ಆಶ್ಚರ್ಯಚಕಿತನಾದ ಭೀಮರಾಯ ಮುತ್ಯಾ ಅದನ್ನು ತಗೆದುಕೊಂಡು ಸಾಧುವನ್ನು ನೋಡಿದಾಗ ಆ ಸಾಧುಮುತ್ಯಾ ಮಾಯವಾಗಿ ಹೋಗಿದ್ದನು. ಎಂದೂ ಅಕ್ಷರ ಜ್ಞಾನವೇ ಇಲ್ಲದ ಭೀಮರಾಯ ಮುತ್ಯಾ ಓದಲು ಪ್ರಾರಂಭಿಸಿದರು. ಓದುತ್ತಾ ಓದುತ್ತಾ ಸಂಸಾರ ಪ್ರಚಂಚವನ್ನು ದಾಟಿ ಧಾರ್ಮಿಕ





ಪ್ರಪಂಚದ ಕಡೆಗೆ ಹೆಜ್ಜೆ ಹಾಕಿದರು. ಮುಂದೆ ಇವರು ಹಲವಾರು ಪವಾಡಗಳನ್ನು ಮಾಡಿದ್ದಾರೆ ಒಮ್ಮೆ ಇವರಿಗೆ ಊರಿನಲ್ಲಿಯ ಉಡಾಳ ಜನ “ನಿನ್ನ ಬಳಿ ಎನಿದೆ ಸುಮ್ಮನೆ ಕ್ಯಾವಿ ಹಾಕಿದಿ” ಎಂದು ಹೇಳಿದಾಗ ಭೀಮರಾಯ ಮುತ್ಯಾ ತಮ್ಮ ಲಂಗೋಟಿಯನ್ನು ಬಿಚ್ಚಿದಾಗ ಲಂಗೋಟಿಯೇ ಹಾವು ಆದಾಗ ಆ ಎಲ್ಲರು ಅಂಜಿ ಓಡಿದರು. ಯಾರಾದರು ಎನನ್ನಾದರು ತಿನ್ನಬೇಕು ಎಂದು ಆಸೆ ಪಟ್ಟು ಮುತ್ಯಾ ನನಗೆ ಇಂದು ಜೇನು ಬೇಕು ಎಂದು ಕೇಳಿದಾಗ ಜೋಳಿಗೆಯಿಂದ ತಗೆದು ಕೊಡುತ್ತಿದ್ದರಂತೆ ಜನರು ಏನೇನು ಬೇಡುವರೋ ಅದನ್ನು ತಮ್ಮ ಜೋಳಿಗೆಯಿಂದ ತಗೆದುಕೊಡುತ್ತಿದ್ದರು. ರೈತರು ಮುತ್ಯಾ ಎನಾದರು ತಿನ್ನಲು ಕೊಡು ಎಂದಾಗ ಜೋಳಿಯಿಂದ ತಿನ್ನಲು ಎನಾದರು ಕೊಡುತ್ತಿದ್ದರು ಅದರಲ್ಲಿ ಜೋಳ ಬಂದರೆ ಆ ವರ್ಷ ಆ ರೈತನ ಹೊಲ ಜೋಳ ಚನ್ನಾಗಿ ಬೆಳೆಯುವದು ಕಡಲಿ ಬಂದಾಗ ಕಡಲಿ ಜಾಸ್ತಿ ಬೆಳೆಯುವದು. ಇದನ್ನು ರೈತರು ಮನಗಂಡಿದ್ದರು. ಭೀಮರಾಯ ಮುತ್ಯಾ ಒಂದು ಸಾರಿ ಒಂದೇ ದಿನದಲ್ಲಿ ಶ್ರೀಶೈಲಕ್ಕೆ ಹೋಗಿ ಅಲ್ಲಿಂದ ಒಂದು ಶಿವಲಿಂಗ ತಂದರಂತೆ ಹಲವಾರು ಜನರು ಇವರು ಮಾಡಿದ ಪವಾಡವನ್ನು ಹೇಳುತ್ತಾರೆ. ಈಗ ನೆಲಮಾಳಸಿದ್ದನ ಗುಡಿಯ ಬಳಿ ಇವರ ಗುಡಿಯನ್ನು ಕಟ್ಟಿಸಿದ್ದಾರೆ ವರ್ಷಕ್ಕೊಮ್ಮೆ ಇವರ ಪುಣ್ಯತಿಥಿ ಮಾಡುತ್ತಿದ್ದಾರೆ.

### ಡ) ಹುಚ್ಚ ಶಿಕಿದ್ರಪ್ಪ ಮುತ್ಯಾ :



ಮುಗ್ಧ ಮನಸ್ಸಿನವರಲ್ಲಿ ದೇವರು ಸದಾ ಇರುತ್ತಾನೆ ಎಂದು ಎಲ್ಲರಿಗೂ ತಿಳಿದ ವಿಚಾರ ಚಿಕ್ಕ ಮಕ್ಕಳನ್ನು ದೇವರಿಗೆ ಹೋಲಿಸುತ್ತಾರೆ ದೊಡ್ಡವರು. ಹುಚ್ಚ

ಶಿಕೀಂದ್ರಪ್ಪ ಮುತ್ಯಾ ಅಂತ ಕರೆಸಿಕೊಂಡು ಹಲವಾರು ಜನರನ್ನು ನಿಬ್ಬೆರಗಾಗಿಸಿದ್ದಾರೆ ಆ ಕಾಲದಲ್ಲಿ ಯಂತ್ರಗಳ ಗಿರಣಿ ಇರಲಿಲ್ಲ ಆಗ ತಾಯಂದಿರು ಜೋಳವನ್ನು ಬೀಸುತ್ತಾ ಹಾಡುತ್ತಿದ್ದರು. ಹೀಗೆ ಹಾಡುತ್ತಿದ್ದವರ ಮನೆಗೆ ಮನಸ್ಸು ಬಂದರೆ ಹೋಗುತ್ತಿದ್ದ ಅವರು ತಮ್ಮ ಕೊರಳಲ್ಲಿಯ ಬಂಗಾರದ ಸರ,ಬೋರುಮಾಳ ಇನ್ನಿತರೆ ಯಾವುದೆ ತರಹದ ಬಂಗಾರದ ಆಭರಣಗಳನ್ನು ಕೊರಳಿಗೆ ಹಾಕಿದರೆ ಅವರ ಜೊತೆಗೂಡಿ ಜೋಳ ಮುಗಿಯುವವರೆಗೆ ಬೀಸುತ್ತಿದ್ದ. ತಾನು ಹಾಕಿಕೊಂಡ ಒಡವೆಯನ್ನು ಯಾರಿಗೂ ಕೊಡುತ್ತಿರಲಿಲ್ಲ. ಓಣಿಯಲ್ಲ ತಿರುಗಾಡಿ ಬಂದು ಆಭರಣ ಕೊಟ್ಟವರಿಗೆ ಮರಳಿ ಕೊಡುತ್ತಿದ್ದ. ಇವರು ನಂದಿಯವರ ಮನೆಯಲ್ಲಿ ಜಾಸ್ತಿ ಇರುತ್ತಿದ್ದರು. ಎಂದು ತಿಳಿದು ಬರುತ್ತದೆ, ಒಮ್ಮೆ ಕವಿಯಾದ ಲಾಲ ಸಾಹೇಬರು ಇಂಡಿ ಊರಿಗೆ ಹೋಗಿ ಗೀಗಿ ಪದ ಹಾಡಕಿಯನ್ನು ಮಾಡಿ ಮರಳಿ ಊರಿಗೆ ಬಂದರು ಆಗ ಬಸ್ಸ್ಟ್ಯಾಂಡನಲ್ಲಿ ತಾವು ತಂದ ಹಣವನ್ನೆಲ್ಲಾ ಖರ್ಚು ಮಾಡುತ್ತಾರೆ. ಮನೆಗೆ ಹೋದಾಗ ಮನೆಯಲ್ಲಿ ಊಟಕ್ಕೆ ಎನು ಇರಲಿಲ್ಲ ಆಗ ಹೇಗೆ ಮಾಡುವದು ಎಂದು ದೇವರನ್ನು ನೆನೆಸುತ್ತಾ ಮಲಗಿದಾಗ ಯಾರೋ ಬಾಗಿಲು ಬಡಿದರು ಯಾರು ಎಂದು ತೆರೆದು ನೋಡಿದಾಗ ಹುಚ್ಚ ಶಿಕೀಂದ್ರಪ್ಪ ಮುತ್ಯಾ ಜೋಳಗಿಯಲ್ಲಿ ರೊಟ್ಟಿಯನ್ನು ಹಿಡಿದುಕೊಂಡು ಬಂದು ತಿನ್ನು ಎಂದು ಹೇಳಿ ಹೊರಟು ಹೋದ ಮುಂದೆ ಇವರು ಮರಣ ಹೊಂದಿದ ಸಂದರ್ಭದಲ್ಲಿ ಲಾಲ ಸಾಹೇಬರು ಹಾಡಿನ ಮುಖಾಂತರ ಅವರನ್ನು ನೆನೆಸಿಕೊಂಡರು. ಎಂದು ಹಿರಿಯರಾದ ಯಲ್ಲಪ್ಪ ಮುತ್ಯಾ ಶೇಕಣ್ಣಿಯವರು ಹೇಳಿದರು.







೧೩

# ಕೆರೆಗಳು, ಬಾವಿಗಳು, ಗುಡ್ಡಗಳು.

**ಕೆರೆಗಳು :**

ಇಂಗಳೇಶ್ವರದಲ್ಲಿ ಒಟ್ಟು ಮೂರು ಮುಖ್ಯ ಕೆರೆಗಳನ್ನು ಕಾಣುತ್ತೇವೆ ಅದರಲ್ಲಿ ೧) ದೊಡ್ಡ ಕೆರೆ ೨) ಹೊಲೇರ ಕೆರೆ ೩) ಪರಮಾನಂದನ ಕೆರೆ ೪) ಕೆಂಗೇರಿ ೫) ಯಂಕನ ಕೆರೆ. ಈ ಯಂಕನ ಕೆರೆಯ ಬಳಿ ಆದಿ ಕಾಲದ ದೇವಾಲಯ ಇರುವದು ಕಾಣಬಹುದು ಆದರೆ ಅದು ಶಿಥಿಲಾವಸ್ಥೆಯಲ್ಲಿದೆ.

**ಬಾವಿಗಳು :**

ಇಲ್ಲಿ ಆದಿಕಾಲದ ಬಾವಿಗಳು ನಮಗೆ ಕಂಡು ಬರುತ್ತವೆ ಅದರಲ್ಲಿ ಮುಖ್ಯವಾಗಿ :

೧) ಹಾಲಬಾವಿ

೨) ಕಲ್ಲಪ್ಪನಬಾವಿ

೩) ಬಸವನ ಬಾವಿ

೪) ಕೋಟೆ ಗೋಡೆಗೆ ಹೊಂದಿಕೊಂಡಿರುವ ಸೌಳ ಬಾವಿ

೫) ಚತ್ರಪ್ಪನ ಬಾವಿ.

ಅದರಂತೆ ಮಠದ ಬಾವಿ ಬಸ್‌ಸ್ಟ್ಯಾಂಡ ಬಾವಿ ಅವಟಿಯರ ಬಾವಿ ಮುಂತಾದವು.

**ಗುಡ್ಡಗಳು :**

ಗ್ರಾಮದ ಸುತ್ತಲೂ ಗುಡ್ಡಗಳು ಸುತ್ತುವರೆದದ್ದರಿಂದ ಇಂಗಳೇಶ್ವರಕ್ಕೆ ಮಳೆಯ ಕೊರತೆ ಇಲ್ಲಿ ಒಟ್ಟು ೯ ಗುಡ್ಡಗಳು ಪ್ರಮುಖವಾಗಿವೆ ಅವು ಈ ಕೆಳಗಿನಂತಿವೆ :

**೧) ರೇವಣಸಿದ್ದೇಶ್ವರರ ಗುಡ್ಡ (ಸಿದ್ದಪ್ಪ ಮುತ್ಯಾನ ಗುಡ್ಡ) :**

ಇದು ಊರಿನಿಂದ ೨ ಕೀಮಿ ಅಂತರದಲ್ಲಿ ಇದೆ ಇಲ್ಲಿ ಶ್ರೀ ಗುರು ರೇವಣಸಿದ್ಧರು ತಪಸ್ಸು ಮಾಡಿದ ದೊಡ್ಡ ದೇವಾಲಯ ಇದೆ ಈ ಗುಡ್ಡದ ಪೂರ್ವದಿಕ್ಕಿನಲ್ಲಿ ಅಕ್ಕ ನಾಗಮ್ಮನ ಗವಿ ಚನ್ನಬಸವಣ್ಣನ ಗುಡಿ ಅಕ್ಕನಾಗಮ್ಮನ ಜಿನುಗು ಕೆರೆ ಇದೆ

**೨) ಮಹಾಕಾಳಿ ಗುಡ್ಡ :**

ರೇವಣಸಿದ್ದೇಶ್ವರರ ಗುಡ್ಡದ ಪಕ್ಕದಲ್ಲಿರುವ ಗುಡ್ಡವನ್ನು ಎಲ್ಲರೂ ದೆಗಿನಾಳರ ಗುಡ್ಡ, ಬುಗುಟಗಾರರ ಗುಡ್ಡ ಎಂದು ಕರೆಯುವರು ಆದರೆ ಅದು ಮಹಾಕಾಳಿಯ ಗುಡ್ಡ ನಿಮಗೆ ಗೊತ್ತಿರಬಹುದು ಯಂಕನಕ್ವರಿಯ ಬಗ್ಗೆ ಇಲ್ಲಿ ಒಂದು ಹಳೆಯದಾದ ಗುಡಿ ಇದ್ದು ಅದು ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಇಲ್ಲಿ ಸಂಶೋಧನೆ ಕೈಕೊಂಡಾಗ ಭಗ್ನಗೊಂಡಿರುವ ಮಹಾಕಾಳಿಯ ಮೂರ್ತಿವು ಕಂಡು ಬಂದಿತು ಆ ಕಾರಣದಿಂದಲೇ ಈ ಗುಡ್ಡವನ್ನು ಮಹಾಕಾಳಿಯ ಗುಡ್ಡ ಎಂದು ಕರೆದಿದ್ದು

**೩) ಲಕ್ಷ್ಮೀ ಗುಡ್ಡ :**

ಇದು ಊರು ಬಿಟ್ಟು ೪ ಕೀ.ಮಿ ಅಂತರದಲ್ಲಿರುವ ಬಾಗೇವಾಡಿಯ ರಸ್ತೆಗೆ ಹೊಂದಿಕೊಂಡಿರುವ ಪುಜಾರಿ ಯವರ ಮನೆತನದ ಹೊಲದಲ್ಲಿ ಇದೆ ಇಲ್ಲಿ ಲಕ್ಷ್ಮೀ ದೇವಿ ಇದ್ದಾಳೆ ಹಾಗೂ ಇಲ್ಲಿಯೇ ಮುಗ್ಧ ಸಂಗಯ್ಯನ ಗವಿ ಕಂಡು ಬಂದಿದ್ದು.

**೪) ಗೌರಿ ಗುಡ್ಡ :**

ಇದು ಲಕ್ಷ್ಮೀ ಗುಡ್ಡದ ಪಕ್ಕದಲ್ಲಿಯ ಪೂಜಾರಿಯವರ ಮನೆತನಕ್ಕೆ ಸೇರಿದ ಹೊಲದಲ್ಲಿ ಇದೆ ಇಲ್ಲಿ ಗೌರಾದೇವಿಯು ನೆಲೆಸಿದ್ದಾಳೆ

**೫) ದ್ರಾಕ್ಷಾಯಣಿ ಗುಡ್ಡ :**

ಇದು ಇಂಗಳೇಶ್ವರ, ಬಳ್ಳಾವುರ ಮತ್ತು ಬಾಗೇವಾಡಿ ಸೀಮೆಯ ಮಧ್ಯ ಈ ಗುಡ್ಡ ಇದೆ. ಇಲ್ಲಿ ದ್ರಾಕ್ಷಾಯಣಿ ದೇವಿ ನೆಲೆಸಿದ್ದಾಳೆ





**೬) ಎಂಟೆತ್ತಿನ ಗುಡ್ಡ :**

ಗುಡ್ಡವು ಗ್ರಾಮದ ಪೂರ್ವದಿಕ್ಕಿನಲ್ಲಿ ಇದೆ ಇದು ಊರಿನಿಂದ ಸುಮಾರು ೨ ಕೀಮಿ ಅಂತರದಲ್ಲಿ ಸಾಲವಾಡಗಿ ದಾರಿಯಲ್ಲಿದೆ ಇಲ್ಲಿ ಆದಿ ಮಾನವರು ವಾಸವಿರುವ ಕುರುಹುಗಳು ನಮಗೆ ಕಾಣ ಸಿಗುತ್ತವೆ.

**೭) ಆನಿಸೊಂಡಿ ಗುಡ್ಡ :**

ಇದು ಅರಳಿಚೆಂಡಿ ಮತ್ತು ಇಂಗಳೇಶ್ವರ ಸೀಮೆಯ ಮಧ್ಯವಿರುವ ಗುಡ್ಡ

**೮) ಗುಲಗಂಜಿ ಗುಡ್ಡ :**

ಇದು ಇಂಗಳೇಶ್ವರ ಕರಭಂಟನಾಳ ಮತ್ತು ಅರಳಿಚೆಂಡಿಗೆ ಸೀಮೆಯ ಮಧ್ಯವಿದೆ.

**೯) ಹೋರಿಮಟ್ಟಿಗುಡ್ಡ :**

ಎತ್ತರ ಕಡಿಮೆ, ವಿಶಾಲವಾದ ಹಚ್ಚ ಹಸುರಿನ ಗಿಡಮರಗಳ ಮಧ್ಯ ಈ ಗುಡ್ಡವಿದೆ. ಜಾನಪದದಲ್ಲಿ ಬಸವಣ್ಣ ಈ ಹೋರಿಮಟ್ಟಿಯ ಗುಡ್ಡದಲ್ಲಿ ಹುಟ್ಟಿದಾ ಎಂದು ಹಾಡು ಹಾಡುತ್ತಾರೆ.

೧೪

# ಇಂಗಳೇಶ್ವರದ ಜಾತ್ರೆಗಳು

ಇಲ್ಲಿ ಹಿಂದೂಗಳು ಜಾಸ್ತಿ ಇರುವದರಿಂದ ಹಿಂದೂಧರ್ಮದ ಎಲ್ಲಾ ಹಬ್ಬವನ್ನು ಅಚ್ಚುಕಟ್ಟಾಗಿ ಮಾಡುತ್ತಾರೆ.

**ಶ್ರೀ ರೇವಣಸಿದ್ದೇಶ್ವರ ಜಾತ್ರೆ :**

ಶ್ರೀ ರೇವಣಸಿದ್ದೇಶ್ವರ ಜಾತ್ರೆಯೇ ಅತಿದೊಡ್ಡ ಜಾತ್ರೆ ಇದು ಗೌರಿ ಹುಣ್ಣಿಮೆಯಿಂದ ನಿರಂತರವಾಗಿ ಒಂದು ತಿಂಗಳ ಕಾಲ ಪುರಾಣಪ್ರವಚನ ನಡೆದು ಹೊಸ್ತಿಲ ಹುಣ್ಣಿಮೆಯ ದಿನ ಬಾನ (ನೈವೈದ್ಯ) ಕೊಡುವದು ಮರುದಿನ

ದೇವರು ಗುಡ್ಡ ಎರುವದು. ಜಾತ್ರೆಯಲ್ಲಿ ಕುಸ್ತಿ, ಭಾರ ಎತ್ತುವದು, ಎತ್ತಿನಗಾಡಿ ರೇಸ್, ಟಗರಿನ ಕಾಳಗ, ಕ್ರಿಕೇಟ್, ನಾಟಕ, ಮದ್ದು ಸುಡುವದು, ಹಲವಾರು ಮನರಂಜನೆಯ ಕಾರ್ಯಕ್ರಮ ಜರಗುವವು ಹೀಗೆ ಐದು ದಿನಗಳ ಕಾಲ ನಡೆಯುವ ಈ ಜಾತ್ರೆಯು ಬಹಳ ವಿಜ್ರಂಬಣೆಯಿಂದ ಜರಗುತ್ತದೆ

**ಶ್ರೀ ಸಿದ್ದಲಿಂಗೇಶ್ವರ ಜಾತ್ರೆ** : ಶ್ರೀ ಸಿದ್ದಲಿಂಗೇಶ್ವರ ಪುಣ್ಯತಿಥಿಯು ಮೇ ಅಥವಾ ಜೂನ್ ತಿಂಗಳಲ್ಲಿ ವಿಜ್ರಂಬಣೆಯಿಂದ ನಡೆಯುತ್ತದೆ

**ನೆಲಮಾಳಸಿದ್ದನ ಜಾತ್ರೆ** : ಯುಗಾದಿಯಾದ ಐದನೇ ದಿನ ೨ ದಿನಗಳ ಕಾಲ ನಡೆಯುತ್ತದೆ

ಅದರಂತೆ ಹಿರೇಮಠ ಜಾತ್ರೆ, ಭೀರಲಿಂಗೇಶ್ವರ ಜಾತ್ರೆ, ಯಲ್ಲಮ್ಮ ದೇವಿ ಜಾತ್ರೆ, ಲಕ್ಷ್ಮೀ ದೇವಿಯ ಜಾತ್ರೆ ಚೌಡೇಶ್ವರಿಯ ಜಾತ್ರೆ ಪಾರ್ವತಿದೇವಿ ಜಾತ್ರೆ ಹಲವಾರು ಸಂತ-ಶರಣರ ಜಾತ್ರೆ ಮತ್ತು ಜಯಂತಿ ನಡೆಯುತ್ತವೆ.



೧೫

# ಇಂಗಳೇಶ್ವರದಲ್ಲಿಯ ವಿಶೇಷಗಳು

**ಗ್ರಾಮ ದೇವತೆಗಿಲ್ಲ ಉಡಿ ತುಂಬುವ ಕಾರ್ಯಕ್ರಮ :**

ಭಾರತ ಹಳ್ಳಿಗಳ ನಾಡು ಇಲ್ಲಿ ಸುಮಾರು ಜನ ಒಕ್ಕಲುತನವನ್ನೆ ನಂಬಿಕೊಂಡಿದ್ದಾರೆ ನಮ್ಮಲ್ಲಿಯೂ ಸಹ ಬಹಳ ಜನ ರೈತರಿದ್ದಾರೆ.ಎಲ್ಲಾ ಊರಿನಲ್ಲಿ ಮಳೆಗಾಲ ಪ್ರಾರಂಭದಲ್ಲಿ ಊರ ದೇವತೆಗೆ ಉಡಿಯನ್ನು ತುಂಬಿದರೆ ನಮ್ಮ ಊರಿನಲ್ಲಿ ಆಚರಣೆ ಬೇರೆ ಇಲ್ಲಿ ಊರಿನ ಮಗಳಾದ ಅಕ್ಕನಾಗಮ್ಮನಿಗೆ ಉಡಿ ತುಂಬುವದು ವಿಶೇಷ ಇಲ್ಲಿ ಮೊದಲೂ ಊರಿಂದ ಕಾಲು ನಡಿಗೆಯಿಂದ ಕೃಷ್ಣಾ ನದಿಗೆ ಹೋಗಿ ಅಲ್ಲಿ ಸ್ನಾನ ಮಾಡಿ ಮಡಿಯಿಂದ ನೀರನ್ನು ಕಾಲನಡಿಗೆಯಿಂದ ತಂದು ಊರಿನ ಸುತ್ತಲಿರುವ ಎಲ್ಲಾ ದೇವರಿಗೆ ಕಾಯಿಯನ್ನು ಒಡೆದು ನಂತರ ಅಕ್ಕನಾಗಮ್ಮನ ಗವಿಗೆ ತೆರಳಿ ಅಲ್ಲಿ ಅಕ್ಕನಾಗಮ್ಮನಿಗೆ ಪೂಜೆ ಸಲ್ಲಿಸಿ ಐದು ಜನ ಬಾಲ ಮುತ್ತೈದೆಯರು ಹಾಗೂ





ಸ್ವಾಮೀಜಿಗಳನ್ನು ಪ್ರಸಾದ ಮಾಡಿಸಿ ನಂತರ ತಿಂಗಳೇಶ್ವರದಲ್ಲಿ ಊರಿನ ಜನರಿಗೆ ಪ್ರಸಾದ ಮಾಡಿಸುವರು.

**ಮಳೆಗಾಗಿ ಕೊಡದಪೂಜೆ ಆಚರಣೆ :**

ಸಿಂದಗಿಯಲ್ಲಿ ನಾಥ ಪಂಥದವರು ಹೇಗೆ ಕೊಡ ತಿರುಗಿದರೆ ಮಳೆಯಾಗುತ್ತದೆ ಎಂದು ಭವಿಷ್ಯ ಹೇಳುತ್ತಾರೋ ಹಾಗೇ ಇಂಗಳೇಶ್ವರದ ಗುರಪ್ಪ ಗುರಪ್ಪ ದೇವುರರ ಮನೆತನದಲ್ಲಿ ಒಂದು ಕೊಡವಿದೆ ಊರಿನಲ್ಲಿ ಮಳೆಯಾಗದಿದ್ದಾಗ ಈ ಕೊಡವನ್ನು ಶ್ರಾವಣ ಮಾಸದ ನಂತರ ಈ ಕೊಡಕ್ಕೆ ಪೂಜೆ ನೆರವೇರಿಸಿ ಮಳೆಯ ಭವಿಷ್ಯವನ್ನು ಕೇಳುತ್ತಾರೆ ಇದಕ್ಕೆ ಮೊದಲು ಚತ್ರಪ್ಪನ ಬಾವಿಗೆ ಹೋಗಿ ಮಡಿಯಿಂದ ನೀರು ತಂದು ಗೋದಿಯ ನೆಲ್ಲಕ್ಕಿ ಹಾಕಿ ಅದರ ಮೇಲೆ ಆ ಕೊಡವನ್ನು ಇಡುತ್ತಾರೆ ಅದಕ್ಕೆ ಪೂಜೆ ಮಾಡಿ ಮೂರು ಜನ ಗಂಡಸರು ಹಾಗೂ ಇಬ್ಬರು ಹೆಣ್ಣು ಮಕ್ಕಳು ಐದು ಮಂದಿ ಕೂಡಿ ಆ ಕೊಡಕ್ಕೆ ಐದು ಜನ ತಮ್ಮ ಕೈಯನ್ನು ಹಚ್ಚಿದಾಗ ಅಲ್ಲಿ ಕುಳಿತ ಪೂಜಾರಿಯು ಒಂದೊಂದು ಮಳೆಯನ್ನು ಕೇಳುತ್ತಾ ಯಾವ ಚರಣದಲ್ಲಿ ಎಷ್ಟು ಮಳೆಯಾಗುತ್ತದೆ ಎಂದು ಕೇಳುತ್ತಾನೆ. ಆಗ ಯಾವ ಮಳೆಗೆ ಕೊಡ ಜೋರಾಗಿ ತಿರುಗುತ್ತೋ ಆ ಮಳೆಯಾಗುತ್ತದೆ ಎಂದು ರೈತರ ನಂಬಿಕೆ.

**ಬನ್ನಿ ಕೊಡುವದು :**

ಊರಿನಲ್ಲಿ ಮಹಾನವಮಿ ಹಬ್ಬದ ಪ್ರಯುಕ್ತ ಬನ್ನಿ ಮುಡಿಯುವದು ಇಲ್ಲಿ ವಿಶೇಷ ಮೊದಲು ರೇವಣಸಿದ್ದೇಶ್ವರರ ಪಲ್ಲಕ್ಕಿಯು ಚಂದರಶಾಲೆಯಿಂದ ಬೃಂಗೀಶ ಶೀವಾಚಾರ್ಯರನ್ನು ಕುದುರೆ ಮೇಲೆ ಕರೆದುಕೊಂಡು ಹೊರಟು ಊರಿನ ಪೂರ್ವದಿಕ್ಕಿನಲ್ಲಿರುವ ಚತ್ರಪ್ಪನ ಬಾವಿ ಹತ್ತಿರ ಇರುವ ರಾಘಣ್ಣ ಜೋಶಿಯವರ ಹೊಲದಲ್ಲಿಯ ಬಸವಣ್ಣನ ಕಟ್ಟೆಯ ಮೇಲಿರುವ ಎರಡು ಬನ್ನಿಯ ಗಿಡಕ್ಕೆ ಪೂಜೆ ಸಲ್ಲಿಸಿದ ನಂತರ ಬನ್ನಿ ವಿನಿಮಯ ಮಾಡಿಕೊಂಡ ನಂತರ ಊರಿನಲ್ಲಿ ಬನ್ನಿ ವಿನಿಮಯ ಮಾಡುವರು

**ಪ್ರಾಚೀನ ಕಾಲದಲ್ಲಿಯ ಶಿಕ್ಷಣ :**

ಪ್ರಾಚೀನ ಕಾಲದಲ್ಲಿ ವಿದ್ಯಾಭ್ಯಾಸಗಳು ಮರದ ಕೆಳಗೆ, ಅಗ್ರಹಾಗಳಲ್ಲಿ,ದೇವಾಲಯ ಮಠಗಳಲ್ಲಿ ನಡೆಯುತ್ತಿದ್ದವು ನಮ್ಮ ಜಿಲ್ಲೆಯಲ್ಲಿಯೇ ಮೊದಲು ಶಿಕ್ಷಣ ಅರಿವನ್ನು ಮೂಡಿಸಿದವರೆಂದರೆ ರಾಷ್ಟ್ರಕೂಟರು ಈ ರಾಷ್ಟ್ರಕೂಟರ ದೊರೆ ಮೂರನೇಯ ಕೃಷ್ಣನ ಪ್ರಧಾನಿಯಾದ ಸಂಧಿ ನಾರಾಯಣ

ಎಂಬುವನು ಇಂಡಿ ತಾಲೂಕಿನ ಸಾಲೋಟಗಿಯಲ್ಲಿ ಇರುವ ತ್ರೈಪರುಷ ದೇವಾಲಯ ಜೊತೆ ಶಾಲೆಯನ್ನು ತರೆದ ಅಂಶ ತಿಳಿಯುತ್ತದೆ ಅಂದರೆ ನಮ್ಮ ಭಾಗದಲ್ಲಿಯೇ ಪ್ರಥಮವಾಗಿ ಶಾಲೆಯನ್ನು ತೆರೆದ ಕೀರ್ತಿ ಸಂಧಿ ನಾರಾಯಣನಿಗೆ ಸಲ್ಲುತ್ತದೆ.

ನಂತರ ಬಂದ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಇಂಗಳೇಶ್ವರವು ಜೈನರ ವಿದ್ಯಾಕೇಂದ್ರವಾಗಿತ್ತು ಎಂದು ತಿಳಿದು ಬರುತ್ತದೆ ಅದರಂತೆ ವಿವಿಧ ಪಠ್ಯ ಬೋಧಿಸುವ ಭಟ್ಟ ವೃತ್ತಿಗೆ ಭೂಮಿಯನ್ನು ಹಂಚಿಕೊಟ್ಟ ಮಹತ್ವದ ಸಂಗತಿಯನ್ನು ಕಲಕೇರಿಯ ಶಾಸನಗಳಿಂದ ತಿಳಿದು ಬರುತ್ತದೆ ಮತ್ತು ದಿನಂಪ್ರತಿ ಪಠಿಸುವ ಪೂರಾಣ ಭಾಗವನ್ನು ಖಂಡಿಕವೆನ್ನಲಾಗುತ್ತಿದ್ದು ಇಂಗಳೇಶ್ವರ ಮತ್ತು ಸಾಲೋಟಗಿ ಶಾಸನಗಳು ಪುರಾಣ ಖಂಡಿಕಕ್ಕೆ ದಾನ ಬಿಟ್ಟಿದ್ದನ್ನು ತಿಳಿಸುತ್ತದೆ

**ಬ್ರಿಟೀಷರ ಕಾಲದಲ್ಲಿ ಪ್ರಾರಂಭವಾದ ಪ್ರಾಥಮಿಕ ಶಾಲೆ :**

ಇಂಗ್ಲೀಷ ಈಸ್ಟ್ ಇಂಡಿಯಾ ಕಂಪನಿಯ ನೌಕರರ ಮಕ್ಕಳಿಗೆ ಇಂಗ್ಲೀಷ ಶಿಕ್ಷಣ ಕಲಿಸುವ ಸಲುವಾಗಿ ೧೮೧೫ ರಲ್ಲಿ ಬಾಂಬೆ ಎಜ್ಯುಕೇಷನ್ ಸೊಸೈಟಿಯನ್ನು ಸ್ಥಾಪಿಸಿದರು, ನಮ್ಮ ವಿಜಯಪುರ ಜಿಲ್ಲೆಯು ಮುಂಬೈನ ಪ್ರಾಂತ್ಯವಾದರಿಂದ ೧೮೪೦ ರಿಂದ ಸೋಲ್ಲಾಪುರ ಜಿಲ್ಲೆಯ ಕನ್ನಡ ಪ್ರದೇಶಗಳಾದ ಚಡಚಣ ಮನಗೂಳಿ ಇಂಡಿ ಆಲಮೇಲ ಮುಂತಾದ ಕಡೆಗಳಲ್ಲಿ ಇಂಗ್ಲೀಷ ಶಾಲೆಗಳು ತೆರೆದವು. ವಿಜಯಪುರದಲ್ಲಿ ೧೮೫೩ ರಲ್ಲಿ ಸರಕಾರದಿಂದ ಪ್ರಾರಂಭವಾದ ಪ್ರಥಮ ಶಾಲೆಯೇ ಆಂಗ್ಲೋ ವರ್ನ್ಯಾಕ್ಯುಲರ್ (ಎ.ವಿ) ಶಾಲೆ ಅದೇ ವರ್ಷ ಒಂದು ಸೆಕೆಂಡ್ ಗ್ರೇಡ್ ಎ.ವಿ ಶಾಲೆ ಪ್ರಾರಂಭವಾಯಿತು ನಂತರ ೧೮೬೪ ರಲ್ಲಿ ಕಲಾದಗಿ ಜಿಲ್ಲೆಯಾದಾಗ ೪೬ ಪ್ರಾಥಮಿಕ ಶಾಲೆ ತೆರೆದಿದ್ದವು ಅವುಗಳು ಮುಂದೆ ೧೮೮೩ ವೇಳೆಗೆ ೧೪೧ ಕನ್ನಡ ಗಂಡು ಮಕ್ಕಳ ಶಾಲೆ ೬ ಎ ವಿ ಶಾಲೆಗಳು ನಾಲ್ಕು ಉರ್ದು ಶಾಲೆ ೩ ಮರಾಠಿ ಶಾಲೆ ೧ ಕನ್ನಡ ಹೆಣ್ಣು ಮಕ್ಕಳ ಶಾಲೆ ೧ ಕನ್ನಡ ಮತ್ತು ಇಂಗ್ಲೀಷ ಕಲಿಸುವ ಹೆಣ್ಣು ಮಕ್ಕಳ ಶಾಲೆ ಒಟ್ಟು ೧೫೬ ಶಾಲೆಗಳು ಆದವು.

ನಮ್ಮ ಇಂಗಳೇಶ್ವರದ ಶಾಲೆಯು ೧೮೭೩ ರಲ್ಲಿ ತೆರೆದ ಶಾಲೆಯಾಗಿದೆ.ಅಂದರೆ ಇಂದಿಗೆ ೨೦೨೧ ಕ್ಕೆ ೧೪೯ ವರ್ಷವಾಗುತ್ತದೆ ೨೦೨೦ ರ ಶಾಲೆಯ ಜನಗಣತಿ ನೋಡುವದಾದರೆ ಇಲ್ಲಿ ೧ ರಿಂದ ೭ ನೇ ವರ್ಗದ ವರೆಗೆ ತರಗತಿಗಳು ನಡೆಯುತ್ತವೆ ಒಟ್ಟು ೧೬೪ ವಿದ್ಯಾರ್ಥಿಗಳು ವಿಧ್ಯಾಭ್ಯಾಸ ಮಾಡುತ್ತಿದ್ದಾರೆ.





**ಕನ್ನಡ ಹೆಣ್ಣು ಮಕ್ಕಳ ಶಾಲೆ :**

"ಹೆಣ್ಣೊಂದು ಕಲಿತರೆ
ಶಾಲೆಯೊಂದು ತೆರೆದಂತೆ"

ಎಂಬ ಗಾದೆ ಬಸವಣ್ಣ ಹೆಣ್ಣು ಮಕ್ಕಳಿಗೆ ಸಮಾನತೆ ಮತ್ತು ಸ್ವಾತಂತ್ರ್ಯ ಕೊಟ್ಟಿದ್ದನೋ ಹಾಗೆ ನಮ್ಮೂರಿನಲ್ಲಿ ಹೆಣ್ಣು ಮಕ್ಕಳಿಗೆ ಸ್ವಾತಂತ್ರ್ಯ ಕೊಟ್ಟಿದ್ದರು ಆ ಕಾರಣದಿಂದಲೇ ಏನೋ ಬ್ರಿಟಿಷರ ಕಾಲದಲ್ಲಿ ಅಂದರೆ ೧೯೩೫ ರಲ್ಲಿ ಸರಕಾರಿ ಹೆಣ್ಣು ಮಕ್ಕಳ ಶಾಲೆಯನ್ನು ತೆರೆಯಲಾಯಿತು ಅದರಂತೆ ೨೦೨೧ ಕ್ಕೆ ೮೬ವರ್ಷ ಇಲ್ಲಿ ೨೦೧೯=೨೦೨೦ ಸಾಲಿನಲ್ಲಿ ಒಟ್ಟು ೨೨೮ ವಿದ್ಯಾರ್ಥಿಗಳು ಸದ್ಯ ಕಲಿಯುತ್ತಿದ್ದಾರೆ. ಇಲ್ಲಿ ೧ ರಿಂದ ೭ ನೇ ವರ್ಗದ ವರೆಗೆ ಶಿಕ್ಷಣ ಕಲಿಯುತ್ತಿದ್ದಾರೆ.

ಇನ್ನೊಂದು ವಿಶೇಷ ಎನೆಂದರೆ ನಮ್ಮ ಎಲ್ಲಾ ಶಾಲೆಯ ಅಂಕಿ ಅಂಶವನ್ನು ತಿಳಿದುಕೊಂಡಾಗ ಕೇರಳದಲ್ಲಿ ಹೇಗೆ ಹೆಣ್ಣು ಮಕ್ಕಳ ಸಂಖ್ಯೆ ಜಾಸ್ತಿ ಇದೆಯೋ ಹಾಗೆ ನಮ್ಮ ಊರಿನಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಜಾಸ್ತಿ ಎಂದು ತಿಳಿಯುತ್ತದೆ.

**ಇಂಗಳೇಶ್ವರದ ಹೈಸ್ಕೂಲ್ ಶಾಲೆ :**

ಪ್ರೌಢ ಶಾಲೆಯನ್ನು ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳನ್ನು ಆ ಕಾಲದ ಶಾಸನಗಳಲ್ಲಿ ಛಾತ್ರರು ಎಂದು ಕರೆಯುತ್ತಿದ್ದರು. ೧೮೩೫ ರಲ್ಲಿ ಜರ್ಮನಿಯ ಬಾಸೆಲ್ ಪಾದ್ರಿಗಳು ತಮ್ಮ ಧರ್ಮ ಪ್ರಚಾರಕ್ಕಾಗಿ ಮಂಗಳೂರನ್ನು ಕೇಂದ್ರವನ್ನಾಗಿಸಿಕೊಂಡು ಪ್ರೌಡ ಶಾಲೆಗಳನ್ನು ಆರಂಭಿಸಿದರು ೧೮೬೬ ರಲ್ಲಿ ಆಗಿನ ಕಲಾದಗಿಯಲ್ಲಿ ಒಂದು ಆಂಗ್ಲಮಾಧ್ಯಮ ಶಾಲೆ ತೆರೆದರು. ನಂತರ ಮುಂದೆ ೧೮೮೫ರಲ್ಲಿ ವಿಜಯಪುರ ಜಿಲ್ಲೆಯಾದಾಗ ಹಿಂದುಳಿದ ಜಿಲ್ಲೆಗೊಂದು ಪ್ರೌಡಶಾಲೆ ಪ್ರಾರಂಭಿಸಬೇಕು ಎಂಬ ಸರ್ಕಾರದ ಧೋರಣೆಯಾಗಿತ್ತು.ಅದರಂತೆ ವಿಜಯಪುರದಲ್ಲಿ ಕೃಷಿ ಫೌಡ ಶಾಲೆ ಆರಂಭವಾಯಿತು. ಮುಂದೆ ಎಮ್ ಆರ್ ಪಾಟೀಲರ ಶತ ಪ್ರಯತ್ನದ ಫಲವಾಗಿ ನಮ್ಮ ಇಂಗಳೇಶ್ವರದಲ್ಲಿ ೧೯೬೨ ರಲ್ಲಿ ಹೈಸ್ಕೂಲ್ ಶಾಲೆ ಆರಂಭಿಸಲಾಯಿತು. ಇದರಿಂದ ಎಷ್ಟೋ ವಿದ್ಯಾರ್ಥಿಗಳಿಗೆ ಇದು ಬೆಳಕಾಯಿತು.

**ವಿರಕ್ತ ಮಠದ ಶಾಲೆಗಳು :**

ಹಸಿದ ಮಕ್ಕಳಿಗೆ ಅನ್ನ ಹೇಗೆ ಮುಖ್ಯವೋ ಹಾಗೇ ಅಕ್ಷರದಾಹದಿಂದ ನರಳುತ್ತಿರುವ ಮಕ್ಕಳಿಗೆ ಅಕ್ಷರದ ಅಡುಗೆ ಬಡೆಸಿದ್ದು ವಿರಕ್ತಮಠ ಇಲ್ಲಿ ಎಲ್. ಕೆ. ಜಿ. – ಯು.ಕೆ.ಜಿ. ಪ್ರಾಥಮಿಕ. ಪ್ರೌಢಶಾಲೆ. ಪದವಿಪೂರ್ವ. ಪದವಿ. ಬಿಇಡಿ. ಐಟಿಐ ಮುಂತಾದ ಶಾಲೆಯನ್ನು ಪ್ರಾರಂಬಿಸಿದ್ದಾರೆ

**ಬ್ರಿಟೀಷರ ವಿರುದ್ಧ ನಡೆದ ಚಳುವಳಿ :**

**ವೈಯಕ್ತಿಕ ಸತ್ಯಾಗ್ರಹ** : ಮೊದಲನೆಯ ಜಾಗತಿಕ ಯುದ್ಧದಲ್ಲಿ ಭಾಗವಹಿಸಿದರೆ ಸ್ವಾತಂತ್ರ ನೀಡುತ್ತೇವೆ ಎಂದು ನಂಬಿಸಿ ನಂತರ ಸ್ವಾತಂತ್ರ್ಯ ನೀಡಲಿಲ್ಲ ನಂತರ ಮತ್ತೆ ೧೯೩೯ ರಲ್ಲಿ ಎರಡನೆಯ ಜಾಗತಿಕ ಯುದ್ಧದಲ್ಲಿ ನಮ್ಮ ಜನರನ್ನು ಯುದ್ಧಕ್ಕೆ ಸಿದ್ದರಾಗಿ ಎಂದಾಗ ಹಲವಾರು ಜನರಿಗೆ ಎದೆಯಲ್ಲಿ ಕಿಚ್ಚು ಹಂಚ್ಚಿದಂತಾಗಿ ಸತ್ಯಾಗ್ರಹಕ್ಕೆ ಅಣಿಯಾದರು ಅದಕ್ಕೆ ಪುಷ್ಠಿ ನೀಡುವಂತೆ ಮಹಾತ್ಮಾ ಗಾಂಧಿಜೀಯವರು ವೈಯಕ್ತಿಕ ಸತ್ಯಾಗ್ರಹಕ್ಕೆ ಕರೆ ನೀಡಿದರು ಆಗ ನಮ್ಮ ಜಿಲ್ಲೆಯಲ್ಲಿ ಹಲವಾರು ಕಡೆ ಸತ್ಯಾಗ್ರಹ ನಡೆದವು ಬಸಯ್ಯ ಪುರಾಣಿಕರು ಮಾಡಿದ ಭಾಷಣದಿಂದ ಪ್ರೇರಿತರಾದ ನಮ್ಮ ಇಂಗಳೇಶ್ವರದ ಯಮನಪ್ಪ ಅವಟಿಯವರು ಧರೆಪ್ಪ ಮಹಾದೇವಪ್ಪ ಹೆಗಡಿಹಾಳ ಶಿವಪ್ಪ ಮಾಸ್ತಾರ ವಡ್ಡರ ಇವರು ವೈಯಕ್ತಿಕ ಸತ್ಯಾಗ್ರಹ ನಡೆಸಿದ್ದರು

**ಚಲೇಜಾವ್ ಚಳುವಳಿ :** ಭೂಗತ ಚಳುವಳಿಯನ್ನು ನೋಡಿ ನೆಚ್ಚಿಕೊಂಡ ಜಯಪ್ರಕಾಶ ನಾರಾಯಣರು ಎಲ್ಲರಿಗೂ ಕರ್ನಾಟಕ ಮಾದರಿ ಎಂದರು ಅದರಲ್ಲಿ ನಮ್ಮ ಜಿಲ್ಲೆ ಹಾಗೂ ಬಾಗಲಕೋಟ ಜಿಲ್ಲೆಯವರು ಇದ್ದಾರೆ ನಮ್ಮ ತಾಲೂಕಿನ ಮಸಬಿನಾಳ ಡೋಣೂರ ಇಂಗಳೇಶ್ವರದಲ್ಲಿಯೂ ಸಹ ಹಲವಾರು ಜನ ಇಂತಹ ಸತ್ಯಾಗ್ರಹ ಮಾಡಿದ್ದಾರೆ.







೧೬

# ಇಂಗಳೇಶ್ವರದಲ್ಲಿಯ ಕಲಾವಿದರು

**ಡೊಳ್ಳಿನ ಪದದಲ್ಲಿ :**

ಶ್ರೀಶೈಲ ಬೊಮ್ಮಣಗಿ ಸುಪ್ರಸಿದ್ದ ಹಾಡುಗಾರ ಮತ್ತು ನಾಟಿ ವೈದ್ಯಕೂಡಾ ಹೌದು ಇವರು ಹಲವಾರು ಜನರಿಗೆ ಕೈ ಒಳದರೆ ಸಂಧು ತಪ್ಪಿದರೆ ಲಕ್ವಾ ಹೊಡೆದವರಿಗೆ ತಮಗೆ ಕರಗತವಾದ ಕಲೆಯಿಂದ ಅವರಿಗೆ ಆರಾಮ ಮಾಡುತ್ತಾರೆ ಹಾಗೂ ಇವರು ಪ್ರಸಿದ್ದ ಡೊಳ್ಳಿನ ಪದ ಗಾಯಕರಿದ್ದು ತಮ್ಮ ಗಾಯನದಿಂದ ಕರ್ನಾಟಕದ ಕೋಗಿಲೆ ಎನಿಸಿಕೊಂಡಿದ್ದಾರೆ. ಹಾಗೂ ಗಾಯನವನ್ನು ಇತರರಿಗೆ ಹೇಳಿ ಕೊಡುವದರಲ್ಲಿ ಪ್ರಸಿದ್ದಯನ್ನು ಪಡೆದು ಕರ್ನಾಟಕ ಹಾಗೂ ಮಹಾರಾಷ್ಟದಲ್ಲಿ ತಮ್ಮ ಕಲೆಯನ್ನು ಪ್ರದರ್ಶಿಸಿ ಊರಿನ ಕೀರ್ತಿಯನ್ನು ಬೆಳಗಿದ್ದಾರೆ ಅದರಂತೆ ಇಸ್ಲಾಂ ಧರ್ಮದಲ್ಲಿ ಹುಟ್ಟಿದರು ಎಲ್ಲರಿಗೂ ದೇವರು ಒಬ್ಬನೇ ಎಂದು ನಂಬಿದ ಮೈಬು ಹು ಕ್ವಾಟಿ ಇವರು ಚಿಕ್ಕದಿನಿಂದಲೇ ಡೊಳ್ಳಿನ ಹಾಡನ್ನು ಶ್ರೀಶೈಲ ಬೊಮ್ಮಣಗಿ ಇವರಿಂದ ಕರಗತ ಮಾಡಿಕೊಂಡು ಇಡೀ ಕರ್ನಾಟಕ ಹಾಗೂ ಮಹಾರಾಷ್ಟದಲ್ಲಿ ತಮ್ಮ ಗಾಯನದ ಮುಖಾಂತರ ಜನರನ್ನು ಮನರಂಜನೆ ಮಾಡಿದ್ದಾರೆ ಹಲವಾರು ಕ್ಯಾಸೆಟಗಳನ್ನು ಹೊರತಂದು ಜನರಿಗೆ ಹತ್ತಿರವಾಗಿದ್ದಾರೆ ಅದರಂತೆ ದಿ॥ ಅಮೃತ ಕುಲಕರ್ಣಿ, ಯಲ್ಲಪ್ಪ ಕಡಗೊಲ, ಮುದುಕು ಸಿ ಹುಂಡೇಕಾರ, ಗಿರಿಮಲ್ಲ ಅವಟಿ, ನೇತ್ರಾ ಪೂಜಾರಿ ಇತರರೂ ಡೊಳ್ಳಿನ ಪದ ಹಾಡುತ್ತಾರೆ ಅದರಂತೆ ಜಕ್ಕಣಮಾಸ್ತರ ಇಂಡಿ ಮಾಂತು ಮಾಸ್ತರ ಬಾಗೇವಾಡಿ ನಾಡಿನಲ್ಲಿ ಡೊಳ್ಳಿನ ಪದದಲ್ಲಿ ಮಾಸ್ತಾರಾಗಿ ತಮ್ಮ ಚಾಪು ಮೂಡಿಸಿ ಇಂಗಳೇಶ್ವರದ ಕೀರ್ತಿಯನ್ನು ಬಾನೆತ್ತರಕ್ಕೆ ಹಾರಿಸಿದ್ದಾರೆ. ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ದಿವಂಗತ ಅಮೃತರಾವ್ ಮಲ್ಲಾರಾವ್ ಕುಲಕರ್ಣಿಯವರು ಸಹ ಇಂಗಳೇಶ್ವರದಲ್ಲಿ ಡೊಳ್ಳಿನ ಹಾಡಕಿ ಮಾಡಿ ಹಾಗೂ ಸಾಹಿತ್ಯದಲ್ಲಿ ಇವರು ಎತ್ತಿದ ಕೈ ಯಾಗಿದ್ದರು.

**ಭಜನಾ ಮಂಡಳಿ :**

ಇಂಗಳೇಶ್ವರದಲ್ಲಿ ಮೂರು ಭಜನಾ ಮಂಡಳಿ ಇದ್ದು ಅವು :

೧) ಕಲ್ಮೇಶ್ವರ ಭಜನಾ ಮಂಡಳಿ (ಚಂದ್ರಶಾಲೆ)

೨) ಸೋಮೇಶ್ವರ ಭಜನಾ ಮಂಡಳಿ (ದೇಗಲ ಗುಡಿ)

೩) ಬಸವೇಶ್ವರ ಭಜನಾ ಮಂಡಳಿ (ಚಾವಡಿ)

೪) ಮಾರುತೇಶ್ವರ ಭಜನಾ ಮಂಡಳಿ (ಹಣಮಂತ ದೇವಾಲಯ)

**ಗೀಗೀ ಪದ :**

ಗೀ ಗೀ ಪದದಲ್ಲಿ ಹೆಸರಾಂತ ಕವಿ ಹಾಗೂ ಗಾಯಕ ಗೀತೆ ರಚನಕಾರರಾಗಿ ಇಂಗಳೇಶ್ವರದ ಕೀರ್ತಿ ಬೆಳೆಸಿದವರು ಲಾಲ್ ಸಾಬರು ಜಂಬಗಿ ಇವರು ಇಸ್ಲಾಂ ಧರ್ಮದಲ್ಲಿ ಹುಟ್ಟಿದರು ಹಿಂದೂ ಧರ್ಮದ ಬಗ್ಗೆ ಅವರ ಅಪಾರವಾದ ಅಭಿಮಾನ ಹೊಂದಿದ ಕಲಾವಿದರು ಇವರ ಗುರು ಇಂಗಳಿಗಿಯ ಲಾಡ್ಲೇಶಾನ ಇನ್ನೂ ಸಹ ಇವರನ್ನು ಕಲಾವಿದರು ನೆನಪಿಸಿಕೊಳ್ಳುತ್ತಾರೆ.ಒಂದು ದಿನಾ ಡೊಳ್ಳಿನ ಮ್ಯಾಳದಲ್ಲಿ ಶ್ರೀಶೈಲ ಬೊಮ್ಮಣಗಿಯವರಿಗೆ ಒಂದು ಪ್ರಶ್ನೆಯನ್ನು ಕೇಳುತ್ತಾರೆ ಅದು ಹೀಗಿದೆ ಅನ್ನ ಇಲ್ಲ ನೀರು ಇಲ್ಲ ಸಾವಿರ ಮಕ್ಕಳನ್ನು ಹಡೆದವರು ಸಲುಹಿದ ತಾಯಿ ಯಾರು ?

ಎಂದು ಕೇಳಿದಾಗ ಉತ್ತರ ಹೇಳಲು ಬರಲಿಲ್ಲ ಆಗ ಅವರು ಹಾಡು ಕಲಿಸಿದ ಗುರುಗಳಾದ ಲಾಲಸಾಹೇಬರ ಬಳಿ ಬಂದಾಗ ಇದೇನೋ ಬಹಳ ಸರಳ ಐತಿ ಕುಳಬಾನ ಎಂತ ಹೇಳೋ ಎಂದರಂತೆ (ಕುಳಬಾನ ಎಂದರೆ ದನದ ಸೆಗಣಿಯಿಂದ ಮಾಡುವ ಕುಳ್ಳನ್ನು ಸರಿಯಾಗಿ ಜೋಡಿಸಿ ಅದರ ಮ್ಯಾಲೆ ಹೆಂಡಿಯನ್ನು ಸಾರಿಸುವದನ್ನು ಕುಳಬಾನ ಎಂದು ಕರೆಯುವರು) ಇಂತಹ ಒಡಪುಗಳನ್ನು ಬಹಳ ಹೇಳುತ್ತಿದ್ದರು. ಅವರ ಒಂದು ಹಾಡು ಹೀಗಿದೆ :

ರುಂಡ ಇಲ್ಲದೊಂದು ಆನಿ ಕಂಡಿನೋ
ಭೂ ಮಂಡಲದಾಗ
ಬಂಡಿ ಹುಲ್ಲ ತನ್ನ ಸೊಂಡಿಲೇ ಸುತುಕೊಂಡು ತಿಂತಿತೋ ಬಲ್ಲಂಗ...

ಎಂಟ ಕಾಲ ಅದಕ ಬಾಲ ಇದ್ದಿದಿಲ್ಲ
ಮೂಲ ಮುಕಳಿ ಮ್ಯಾಲ
ಚರ್ಮ ರೋಮ ಇಲ್ಲ ರೋಮ ಮೈಯತ್ತಿತ್ತೋ

ಇಂದು ಅವರ ಮಗ ನಬಿಸಾಬ ಜಂಬಗಿ ಮುಂದುವರೆಸಿಕೊಂಡು ಬಂದಿದ್ದಾರೆ.





**ಹಂತಿ ಪದ :**

ಆ ಕಾಲದಲ್ಲಿ ಯಂತ್ರೋಪಕರಣಗಳು ಇಲ್ಲದ ಸಮಯದಲ್ಲಿ ರೈತರು ನಡು ಹೊಲದಲ್ಲಿ ಕಣವನ್ನು ಕಡೆದು ಅದರ ಮದ್ಯ ಮೇಟಿಯನ್ನು ನೆಟ್ಟು ನಂತರದಲ್ಲಿ ಜೋಳದ ತೆನೆಯನ್ನು ಮುರಿದು ಎತ್ತಿಲೇ ತೆನೆಯನ್ನು ತುಳಿಸುತ್ತಿದ್ದರು. ಬೇಸರವಾದಾಗ ರಾತ್ರಿಯಲ್ಲಾ ಹಂತಿ ಹಾಡನ್ನು ಹಾಡುತ್ತಿದ್ದರು. ಅವು ದೇವರ ಹಾಡು ಹಾಗೂ ವಾದಿ (ಎದುರಾಳಿ ಹಾಡು) ಹಾಡು ಇರುತ್ತವೆ. ಎಲ್ಲಾ ರೈತರು ಈ ಹಾಡಗಳನ್ನು ಹಾಡುತ್ತಿದ್ದರು ಆದರೆ ಇಂದು ಯಂತ್ರಗಳು ಬಂದಿದ್ದರಿಂದ ಹಂತಿ ಹೋಗಿವೆ ಹಾಡು ಹಾಡವರು ಅವುಳನ್ನು ಮರೆತಿದ್ದಾರೆ

೧) "ತೆಗ್ಗಿಲ್ಲ ತೆವರಿಲ್ಲ ಮುಗ್ಯಾವು ಎರಡಾಣಿ
ತೆಗಿನ್ಯಾಗೈತಿ ಗೋಲಗೇರಿ
ತೆಗಿನ್ಯಾಗೈತಿ ಗೋಲಗೇರಿ
ಲಿಂಗೈನ ಹುಬನ್ಯಾಗೈತಿ (ಹರಿನಾಮ) ಸಿರ್‌ಗಂದೋ ॥

೨) ಬುದಗನ ತಂದ್ಯಾರೋ
ಭೂದೇವಿ ಗಂಡ್ಯಾರೋ
ಹುಲಿಗೆಪ್ಪನೆಂಬ ಮಗ ಹುಟ್ಟಿ
ಹುಲಿಗೆಪ್ಪನೆಂಬ ಮಗ ಹುಟ್ಟಿ
ಕಣದಾಗ ರಾಶಿ ಅಳೆಯವನ ಹೆಸರೇನೋ ।

ಈ ಹಾಡಗಳನ್ನು ಈಗ ಸುಭಾಷ ಸಿದ್ದಪ್ಪ ಡಿಗ್ಗಾವಿ, ಸಿದ್ದಪ್ಪ ಹದಿಮೂರ ಚಂದ್ರಾಮ ಚ ಮಾದರ, ಮತ್ತಿತರ ಜನರು ಇಂತಹ ಹಾಡುಗಳನ್ನು ಹೋಳಿ ಹುಣ್ಣಿಮೆಯ ದಿನ ಕಾಮನನ ಸುಡುವಾಗ ಹಾಡುತ್ತಾರೆ.

**ನಾಟಕ ಕಂಪನಿ :**

ನಮ್ಮ ಊರಿನಲ್ಲಿ ಹಲವಾರು ಜನರು ನಾಟಕವನ್ನು ಮಾಡುತ್ತಿದ್ದರು ಅದರಲ್ಲಿ ದೊಡ್ಡಾಟ ಅತಿ ಪ್ರಮುಖವಾದದು (ಭೀಮ ದುರ್ಯೋದನರ ಗಧಾಯುದ್ದ.) ಪಾರಿಜಾತ ರೇಣುಕಾ ಯಲ್ಲಮ್ಮ ನಾಟಕ ಹಾಗೂ ಸಾಮಾಜಿಕ ನಾಟಕ ಹೀಗೆ ಹಲವಾರು ನಾಟಕವನ್ನು ನಮ್ಮ ಊರಿನಲ್ಲಿ ಆಡಿದ್ದಾರೆ, ಬಲಭೀಮ ಮ ಕುಲಕರ್ಣಿ. ಸಿದ್ದಲಿಂಗಪ್ಪಗೌಡ್ರು. ಸಿದ್ರಾಮಪ್ಪ ಬಾಗೇವಾಡಿ, ದಿ॥ ಅರವಿಂದ ಕುಲಕರ್ಣಿ ಕಲ್ಲು ಸರ್ ಬಾಗೇವಾಡಿ ಮುಂತಾದವರು ನಾಟಕವನ್ನು ಆಡಿದ್ದಾರೆ ಹಾಗೇ ಇಂಗಳೇಶ್ವರದಲ್ಲಿ ಹಿಂದೂ ಮುಸ್ಲಿಂ ಜಾತಿ–ಧರ್ಮದ ಬಗ್ಗೆ

ಅನೋನ್ಯ ಸಂಬಂದ ಇದ್ದದ್ದರಿಂದ ಇಲ್ಲಿ ಯಾವುದೇ ಧರ್ಮದ ಜಗಳ ಆಗುವದು ಬಹಳ ಕಡಿಮೆ. ದರ್ಗಾದಲ್ಲಿ ಆಚರಿಸುವ ಹಬ್ಬಕ್ಕೆ ನಾವು ಹಾಗೂ ನಾವು ಆಚರಿಸುವ ಜಾತ್ರೆಗೆ ಅವರು ಸಮಾನಭಾವದಿಂದ ಬರುವರು ಆದ್ದರಿಂದ ನಮ್ಮ ಊರು ಒಂದು ಮಾದರಿ ಗ್ರಾಮ ಎಂದು ಹೇಳಬಹುದು. ಇದರಿಂದಲೇ ಶ್ರೀ ಸಿಕೇಂದ್ರಬಾಷಾ ನಾಟ್ಯ ಸಂಘ ಹುಟ್ಟಿಕೊಂಡಿದ್ದು ನಾಡಿನಲ್ಲಿ ರಾಧಾನ ಆಟ ಎಂಬ ನಾಟಕ ಮಾಡುತ್ತಿದ್ದು ಈ ನಾಟ್ಯ ಸಂಘದಲ್ಲಿ ಮುಸ್ಲಿಂ ಜನರೇ ಬಹಳ ಇದ್ದಾರೆ ಇದು ಊರಿನಲ್ಲಿ ಎಲ್ಲಾ ಧರ್ಮದವರು ಒಂದೇ ಎನ್ನುವ ಭಾವನೆ ಇನ್ನಷ್ಟು ಇಮ್ಮಡಿಯಾಗುವಂತೆ ಮಾಡುತ್ತದೆ. ಅದರಂತೆ ಹುಷೇನಿ ಕ್ವಾಟಿ ಇವರು ಬ ಬಾಗೇವಾಡಿ ನಾಟ್ಯ ಸಂಘದಲ್ಲಿ ಸತತವಾಗಿ ಅಭಿನಯಸುತ್ತಿದ್ದಾರೆ ಅದರಂತೆ ಇವರಿಗೆ ಹಲವಾರು ಪ್ರಶಸ್ತಿ ಕೂಡಾ ಬಂದಿವೆ. ಇದರಂತೆ,

### ಅಕ್ಕನ ಬಳಗ :

ಮಹಿಳೆಯರೆಲ್ಲರು ಒಂದುಗೂಡಿದರೆ ಒಂದು ಯೋಜನೆಯನ್ನು ಕಾರ್ಯರೂಪಕ್ಕೆ ತರುವದು ಬಹಳ ಸುಲಭ ಅದರಂತೆ ನಾರಿಯರೆಲ್ಲ ಕೂಡಿಕೊಂಡು ಹಲವಾರು ಸಂಘಗಳನ್ನು ತೆರೆದಿದ್ದಾರೆ ಅವುಗಳು ಈ ರೀತಿ ಇವೆ ಯಲ್ಲಮ್ಮನ ಅಕ್ಕನ ಬಳಗ, ಮಾಯಕ್ಕನ ಅಕ್ಕನ ಬಳಗ ನೆಲಮಾಳಸಿದ್ದೇಶ್ವರ ಅಕ್ಕನ ಬಳಗ ಪಾರ್ವತಿ ಅಕ್ಕನ ಬಳಗ, ಅಕ್ಕನಾಗಮ್ಮನ ಅಕ್ಕನ ಬಳಗ, ಅಕ್ಕಮಾದೇವಿ ಅಕ್ಕನ ಬಳಗ ಹಾಗೂ ಇನ್ನೂ ಹಲವು ಅಕ್ಕನ ಬಳಗವನ್ನು ನೋಡಬಹುದು ಇತ್ತೀಚೆಗೆ ನೆಲಮಾಳಸಿದ್ದೇಶ್ವರ ಅಕ್ಕನ ಬಳಗದ ನಿಂಬೆವ್ವ ಕೆಂಚಪ್ಪ ಗುಬ್ಬಾ ಇವರಿಗೆ ೨೦೧೯ ಸಾಲೀನಲ್ಲಿ ಕೊಡಮಾಡುವ ರಾಜ್ಯಮಟ್ಟದ ಜಾನಪದ ಕಲಾ ಪ್ರಶಸ್ತಿ ಬಂದಿದೆ. ಈ ಪ್ರಶಸ್ತಿಯಿಂದ ಇಂಗಳೇಶ್ವರ ಕೀರ್ತಿ ಪತಾಕೆಯು ಸಹ ಎತ್ತರಕ್ಕೆ ಹಾರಿತು ಎಂದು ಹೇಳಬಹುದು.







# ೧೭

# ಇಂಗಳೇಶ್ವರದಲ್ಲಿಯ ಆಧುನಿಕ ಸಾಹಿತಿಗಳು

### ಆಧುನಿಕ ಸಾಹಿತಿಗಳು :

ಇಂಗಳೇಶ್ವರದಲ್ಲಿ ಮೊದಲಿಗೆ ಸಾಹಿತ್ಯ ಕ್ಷೇತ್ರಕ್ಕೆ ಕಾಲಿಟ್ಟವರೆಂದರೆ ಈರಣ್ಣ ಗೋಲಪ್ಪ ಬೆಕಿನಾಳ. ಸಿದ್ಧಲಿಂಗ ಪ್ರೀಯ ಗೋಲ್ಲಾಳೇಶ ತನಯ ಎಂಬ ಅಂಕಿತನಾಮದಿಂದ ಹಲವಾರು ಕವನ ಸಂಕಲನ, ಕಥೆಗಳು ಸಂಕಲನ, ನಾಟಕ, ಹಾಗೂ ಪವಾಡ ಪುರುಷರ ಜೀವನ ಚರಿತ್ರೆ ಗಳು ೧) ಪೂಜ್ಯ ಶ್ರೀ ಸಿದ್ದಲಿಂಗ ಮಹಾಸ್ವಾಮಿಗಳ ಪುಸ್ತಕ ೨) ಶ್ರೀ ರೇವಯ್ಯಮುತ್ಯಾನ ಪುಸ್ತಕ ಬರೆದಿದ್ದಾರೆ ನಮ್ಮ ಭಾಗದಲ್ಲಿಯೇ ಪ್ರಥಮವಾಗಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿ ತಮ್ಮ ಕವನ ವಾಚಿಸಿದರು ಹಾಗೆಯೇ ಹಲವಾರು ಸಂಘ-ಸಂಸ್ಥೆಗಳಲ್ಲಿ ತಮ್ಮನ್ನು ತಾವು ಸಕ್ರೀಯವಾಗಿ ತೊಡಗಿಸಿಕೊಂಡವರು ಹಲವಾರು ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಈರಣ್ಣ ಬೆಕಿನಾಳರ ಸಾಹಿತ್ಯ ಕೃಷಿಯಲ್ಲಿ ಇಂದಿಗೆ ೨೪ ಕೃತಿಗಳು ಮೂಡಿ ಬಂದಿವೆ. ನಮ್ಮಂತ ಯುವ ಬರಹಗಾರರಿಗೆ ಸಾಹಿತ್ಯದ ಅಡೆತಡೆಗಳನ್ನು ತಿಳಿಸಿ "ಕಟ್ಟೆಗೆ ಕುಂತು ಮಾತ ಹೇಳುತ್ತಾ ಚಕ್ಕಾ ಆಡುವ ಬದಲು ಪೆನ್ನು ಹಾಳೆ ಹಿಡಿದು ಬರವಣಿಗೆ ಮಾಡಿ" ಎಂದು ಸಾಹಿತ್ಯದ ಕೃಷಿಗೆ ಯುವಕರಿಗೆ ತೊಡಗಿಸಿಕೊಳ್ಳುವಂತೆ ಮಾಡುವ ಗುರುಗಳಿವರು ನಮ್ಮ ಬೆಕಿನಾಳ ಸರ್

ಅದರಂತೆ ಶ್ರೀ ಸಿದ್ದಲಿಂಗಪ್ಪ ಹದಿಮೂರ ಇವರು ಸಾಹಿತ್ಯದ ನಾನಾ ಪ್ರಕಾರಗಳಾದ ನಾಟಕ, ಕಥೆ, ಕವನ, ಹೀಗೆ ಹಲವಾರು ಪ್ರಯೋಗ ಶೀಲ ಕೃಷಿಮಾಡಿ ಸುಮಾರು ೧೪ ಕೃತಿಗಳು ಇವರಿಂದ ಮೂಡಿ ಬಂದಿವೆ. ಅದರಂತೆ ಬಸವ ನಾಡಿನ ಸಾಹಿತ್ಯ ಸಂಸ್ಕೃತಿ ಬಳಗವನ್ನು ಸಾಹಿತಿಗಳ ಸಲುವಾಗಿ ಮಾಡಿದ್ದಾರೆ.

ಅದರಂತೆ ಇಂಗಳೇಶ್ವರದ ಬಗ್ಗೆ ಮಹಾ ಪ್ರಬಂದವನ್ನು ಬರೆದು ಎಂ.ಫಿಲ್ ಪಡೆದು ಊರಿನ ಇಂಗಳೇಶ್ವರದ ಇಡೀ ಊರಿನ ಇತಿಹಾಸ ಮೇಲೆ ಬೆಳಕು ಚಲ್ಲುವ ಹಾಗೆ ಮಾಡಿದವರಲ್ಲಿ ಶ್ರೀಮತಿ ಪಾರ್ವತಿ ಎಸ್ ಚೌಕಿಮಠ ಸಹ ಒಬ್ಬರು.

ವೃತ್ತಿಯಲ್ಲಿ ಶಿಕ್ಷಕರಾದ ಶ್ರೀ ಕೆ ಎಸ್ ಬಾಗೇವಾಡಿ ಕೇವಲ ಮಕ್ಕಳಿಗಷ್ಟೆ ಸೀಮಿತವಾಗದೆ ಎಲ್ಲಾ ಬಗೆಯ ಜನಸಾಮನ್ಯರಿಗೆ ತಮ್ಮಲ್ಲಿ ತುಂಬಿಕೊಂಡ ನವರಸವನ್ನು ಹಂಚಿ (ನಾಟಕ, ಡೊಳ್ಳಿನಪದ, ಕಥೆಗಳು, ಕವನಗಳು, ಚುಟುಕುಗಳು ತ್ರಿಪದಿ,) ನವರಸನಾಯಕ ಎನಿಸಿಕೊಂಡಿದ್ದಾರೆ. ಮಕ್ಕಳಲ್ಲಿ ಸೃಜನಶೀಲತೆಯನ್ನು ಬೆಳಸಿ ಉನ್ನತ ಪದವಿಗಳಿಸಲು ನೆರವಾಗುವರೋ ಹಾಗೇ ಯುವ ಬರಹಗಾರಿಗೆ ಮಾರ್ಗದರ್ಶನ ನೀಡಿ ಪ್ರೋತ್ಸಾಹಿಸುವವರು. ಇವರು ಸಾಹಿತ್ಯ ಕೃಷಿಯಲ್ಲಿ ಮೂಡಿ ಬಂದ ಪ್ರಥಮ ಕೃತಿ  ಜೇನ್ಗೋಡ ಇವರ ಈ ಕೃತಿಯನ್ನು ಪುಸ್ತಕ ಪ್ರಾಧಿಕಾರದವರು ಪಡೆದುಕೊಂಡು ಎಲ್ಲಾ ಗ್ರಂಥಾಲಯಕ್ಕೆ ರವಾನಿಸಿದ್ದು ಇದು ಇಂಗಳೇಶ್ವರದಲ್ಲಿಯೇ ಪುಸ್ತಕ ಪ್ರಾಧಿಕಾರದ ಪಡೆದ ಪ್ರಥಮ ಕೃತಿ ಇವರದ್ದಾಗಿದೆ. ಮಂಗನಾಟ ಕವನ ಸಂಕಲನ ಮಕ್ಕಳಿಗಾಗಿಯೇ ಮೂಡಿ ಬಂದಿದೆ, ಎಲ್ಲಾ ಬಗೆಯ ಸಂಘ–ಸಂಸ್ಥೆಗಳೊಂದಿಗೆ ಗುರುತಿಸಿಕೊಂಡು ಹಲವಾರು ಪ್ರಶಸ್ತಿಗೆ ಭಾಜನರಾಗಿದ್ದಾರೆ. ಶ್ರೀ ಶಿವಾನಂದ ಹದಿಮೂರ ಶಿಕ್ಷಕರು ಸಾಹಿತಿಗಳು ಇವರೂ ಸಹ ಸಾಹಿತಿಗಳಿಗೆ ಮಾರ್ಗದರ್ಶಕರು. ಹಾಗೂ ಎಲೆಮರೆಯ ಕಾಯಿಯಂತಿರುವ ಹಲವಾರು ಜನ ಸಾಹಿತಿಗಳು ಇದ್ದಾರೆ.

೧೮

# ಇಂಗಳೇಶ್ವರದಲ್ಲಿಯ ವಿಶೇಷ ವ್ಯಕ್ತಿಗಳು

## ನಾಟಿ ವೈದ್ಯರು :

ಇಡೀ ಜಗತ್ತೇ ಬೆರಗಾಗುವಂತೆ ಔಷದವನ್ನು ತಯಾರಿಸುವದರಲ್ಲಿ ನಮ್ಮ ಋಷಿ ಮುನಿಗಳು ಎತ್ತಿದ ಕೈ ಆ ಕಾಲದಲ್ಲಿಯೇ ಸುಶೂತ್ರ ಎಂಬ ಋಷಿ ಶಸ್ತ್ರ ಚಿಕಿತ್ಸೆಯನ್ನು ನೀಡುತ್ತಿದ್ದರು ಎಂದು ತಿಳಿಯುತ್ತದೆ ಹಲವಾರು ವ್ಯಕ್ತಿಗಳು ಬೆಳ್ಳಿ ಬಂಗಾರವನ್ನು ಸಹ ವನಸ್ಪತಿಯಿಂದ ಮಾಡುತ್ತಿದ್ದರು ಹಲವಾರು ಕಾಯಿಲೆಗಳಿಗೆ ಅವರು ಮನೆಯಲ್ಲಿಯೇ ಮದ್ದು ತಯಾರು ಮಾಡುತ್ತಿದ್ದರು ಹಲವಾರು ಕಾಯಿಲೆಗಳನ್ನು ಗುಣಪಡಿಸುವ ನಾಟಿ ವೈದ್ಯರು ನಮ್ಮ ಇಂಗಳೇಶ್ವರದಲ್ಲಿ ಇದ್ದರು ಅವರಲ್ಲಿ ಮೊದಲಿಗೆ ಕಾಣುವರು ಎಂದರೆ ಅದು ದಿ॥ ಜಾಯಪ್ಪಗೌಡ್ರು ಬಿರಾದಾರ ಇವರು.





## ದಿ॥ ಜಾಯಪ್ಪಗೌಡ್ರು ಬಿರಾದಾರ :

ದಿ॥ ಜಾಯಪ್ಪಗೌಡ್ರು ಔಷದಿಕೊಡುವಲ್ಲಿ ಬಹಳ ಎತ್ತಿದ ಕೈ ಇವರ ಕೈಗುಣಗಳಿಂದ ಇವರ ಹೆಸರು ಸುತ್ತ ಊರಿನಲ್ಲಿ ಹಬ್ಬಿತ್ತು ಇವರಲ್ಲಿಯ ಒಂದು ವಿಶೇಷವೆನೆಂದರೆ ಇವರು ಒಬ್ಬ ವ್ಯಕ್ತಿಯನ್ನು ನೋಡಿದರೆ ಇವನಿಗೆ ಇದೇ ರೋಗ ಬರುತ್ತದೆ ಆ ಕಾರಣ ನೀನು ಈಗಲೇ ಈ ತರಹದ ಪತ್ತೆ ಮಾಡಬೇಕು ಎಂದು ಹೇಳುತ್ತಿದ್ದರು.

## ದಿ॥ ಭೀಯಪ್ಪ ಮುತ್ಯಾ ನಾಟೀಕಾರ :

ಇವರು ಪ್ರಸಿದ್ದವಾದ ನಾಟಿವೈದ್ಯರು. ಇವರು ಗುರುಗಳು ಪೂಜ್ಯ ಸಿದ್ದಲಿಂಗ ಮುತ್ಯಾರು ಇವರ ಕೃಪಾ ಆಶೀವಾದದಿಂದಲೇ ಇವರು ಹಲವಾರು ರೋಗವನ್ನು ಗುಣಪಡಿಸಿದ್ದಾರೆ ಇವರ ಬಳಿ ತಪ್ಪಲ ಶಕ್ತಿ ಬಹಳ ಇತ್ತು "ನನಗೇನ್ ಬರತೈತಿ, ನನ್ನಬಾಯ್ಯಾಗ ಮಣ್ಣಚೆಲ್ಲಿ ಬೆಂಕಿಹಚ್ಲಿ" ಎಂದು ಮಾತನಾಡುತಾ ಹಲವಾರು ಪವಾಡವನ್ನು ಇವರು ಮಾಡಿದ್ದಾರೆ. ಕಲ್ಲಿಗೆ ಕಲ್ಲ ಜಗಳ ಹಚ್ಚಿ ಹೊಲದಲ್ಲಿ ಕಲ್ಲಿನ ವಡ್ಡನ್ನು ಕಟ್ಟಿಸಿಕೊಂಡರು ಎದು ಹಲವಾರು ಜನ ಈಗಲೂ ಆ ಮುತ್ಯಾನ ನೆನಸಿಕೊಳ್ಳುತ್ತಾರೆ ಈ ಭೀಯಪ್ಪ ಮುತ್ಯಾ ಮಾಡಿ ಪವಾಡ ಸರ್ವೆನಂಬರ ರಲ್ಲಿ ಕಲ್ಲಿನ ವಡ್ಡ ಈಗ ನಮಗೆ ನೋಡಲು ಸಿಗುತ್ತದೆ (ತುಪ್ಪದ ಪವಾಡ)  ಇವರ ಮಗನಾದ ದಿ॥ ಮಲ್ಲಪ್ಪನವರು ಇವರು ಸಹ ಹಲವಾರು ರೋಗವನ್ನು ಗುಣಪಡಿಸಿದ್ದಾರೆ

## ದಿ॥ ಹಣಮಂತ ವಡ್ಡರ :

ಇವರು ಸಹ ಪೂಜ್ಯ ಸಿದ್ದಲಿಂಗ ಮುತ್ಯಾನ ಶಿಷ್ಯರು ಇವರು ಸಹ ಹಲವಾರು ಪವಾಡವನ್ನು ಮಾಡಿದ್ದಾರೆ ಇವರು ಬಾಲ ಬ್ರಹ್ಮಚಾರಿ ಇವರು ಹೊಲಕ್ಕೆ ಹೋದಾಗ ಗೋಧಿಯ ಉಬಿಲೇ ನಾಲಿಗೆಯನ್ನು ಕಟ್ಟ ಮಾಡಿಕೊಂಡು ಯವ್ವ ನಾಲಿಗಿ ಹೆಂಗ್ ಜಿಗದ್ಯಾಡತೈತಿ ನೋಡವ್ವ ಎನ್ನುವರು ಮನೆಯವರು ಗಾಬರ್ಯಾಗಿ ಬೈದಾಗ ಮತ್ತೆ ನಾಲಿಗಿಯನ್ನು ಹಚ್ಚಿಕೊಳ್ಳುತ್ತಿದರಂತೆ ಇಂತಹ ಹತ್ತು ಹಲವು ಪವಾಡವನ್ನು ಮಾಡಿದ್ದಾರೆ. ಕೆಲವಷ್ಟು ಔಷದಿಯನ್ನು ಕೊಟ್ಟಿದ್ದಾರೆ ಮೊದಲು ಇವರ ಮನೆತನದ ಹೆಣ್ಣು ಮಗಳು ೨ ವರ್ಷಕೊಮ್ಮೆ ೩ ವರ್ಷಕೊಮ್ಮೆ ಅಗ್ಗಿ ಹಾಯುತ್ತಿದ್ದರಂತೆ ಮುಂದೆ ಸಿದ್ದಲಿಂಗ ಮುತ್ಯಾರು ಅಗ್ಗಿ ಹಾಯಲು ಹಣಮತನಿಗೆ ಪ್ರೇರೇಪಿಸಿದ ನಂತರ ಅಗ್ಗಿ ಹಾಯಲು ಪ್ರಾರಂಭಿಸಿದರಂತೆ.ಎಂದು ಅವರ ಅಣ್ಣನ ಮಗನಾದ ಹಣಮಂತ ವಡ್ಡರ ಅವರು ತಿಳಿಸಿದರು.

## ದಿ॥ ಬಸಪ್ಪ ಚಿಗರಿ :

ಇವರು ಸಹ ನಾಡಿನಾದ್ಯಂತ ಪ್ರಸಿದ್ದಿ ಪಡೆದ ನಾಟಿವೈದ್ಯ. ಆಡ ಮುಟ್ಟದ ತಪ್ಪಲಿಲ್ಲ ಬಸಪ್ಪಮುತ್ಯಾ ಗುಣಪಡಿಸದ ರೋಗವಿಲ್ಲ ಎಂಬ ಮಾತು ಹಲವಾರು ಜನರ ಬಾಯಿಂದ ಬರುತ್ತದೆ ಯಾವ ಜಾತಿ ಬೇದವಿಲ್ಲದೆ ಬಡವ ಬಲ್ಲಿದ ಎನ್ನದೆ ಎಲ್ಲರಿಗೂ ಸಮಾನ ರೀತಿಯಲ್ಲಿ ನೋಡಿ ಹಲವಾರು ಗುಣಪಡಿಸಲಾಗದ ರೋಗವನ್ನು ತಮ್ಮ ಗಿಡಮೂಲಿಕೆಗಳಿಂದ ಗುಣಪಡಿಸಿದ್ದಾರೆ. ಈಗ ಇವರ ಮಕ್ಕಳು ಮುಂದುವರೆಸಿಕೊಂಡು ಬಂದಿದ್ದಾರೆ.

ಅದರಂತೆ ಗಪೂರ್ ಸಾಬ, ಇವರು ಕೈ ಕಾಲು ಮುರಿದರೆ ಅವುಗಳನ್ನು ಸರಿ ಮಾಡುತ್ತಾರೆ ದಿ॥ ಕುಂಬಾರ ಮಲ್ಲಪ್ಪ ಮುತ್ಯಾ ಇವರು ಹಾವು ಕಡಿದರೆ ಔಷದಿಯನ್ನು ನೀಡುತ್ತಿದ್ದರು ಅದರಂತೆ ಡೋಣೂರ ಮನೆತನದಲ್ಲಿ ನಾಯಿ ಕಡಿದರೆ ಬೇರಿನಲ್ಲಿ ಸುಡುತ್ತಿದ್ದರು ಅದರಂತೆ ಕುರಣದರ ಮನೆತನದಲ್ಲಿ ಔಷದಿಯನ್ನು ನೀಡುತ್ತಿದ್ದರು ಅದರಂತೆ ದಿ॥ ಶಬರದ ಬೀಯಪ್ಪ ಮುತ್ಯಾ ಇವರು ಕೈ ಕಾಲು ಒಳದರೆ ತಿಕ್ಕಿ ಸರಿಮಾಡುತ್ತಿದ್ದರು.

## ಸೂಲಗಿತ್ತಿ ಮುತ್ತವ್ವ :

ಮಂಗಳೂರು ಮುತ್ತವ್ವ ಎಂದು ಬಹಳ ಪ್ರಸಿದ್ದವಾದ ಸೂಲಗಿತ್ತಿ ಇವರು. ಸುಮಾರು ೫೦ ವರ್ಷಗಳ ಕಾಲ ಹೆರಿಗೆಯ ಕಾಯಕವನ್ನು ಮಾಡಿಕೊಂಡು ಬಂದ ಮಹಾತಾಯಿ. ಇವಳು ಹುಟ್ಟಿದ ಊರು ನಾಗರಾಳ (ಬಬಲೇಶ್ವರ ಬಳಿ) ಇವರ ತಂದೆ ಅಡಿವೆಪ್ಪ ತಾಯಿ ಭಾಗವ್ವ ಇವರು ಇಂಗಳೇಶ್ವರಕ್ಕೆ ದುಂಡಪ್ಪ ಮಂಗಳೂರ ಅವರನ್ನು ಮದುವೆಯಾಗಿ ಬಂದರು. ಆಗ ವೈದ್ಯರೇ ಕಡಿಮೆ ಇದ್ದ ಕಾಲದಲ್ಲಿ ವೈದ್ಯರಗಿಂತ ಮಿಗಿಲಾಗಿ ಹೆರಿಗೆ ಮಾಡಿಸಿಕೊಳ್ಳುತ್ತಿದ್ದಳು ಅಜ್ಜಿ.ಯಾವುದೆ ಜಾತಿ ಬೇದ ಇಲ್ಲದೆ ರಾತ್ರಿ ಎಷ್ಟೋ ಹೊತ್ತಾದರು ಬರುತ್ತಿದ್ದರು. ಗರ್ಭಿಣಿಯಾದ ಹೆಣ್ಣು ಮಗಳ ಬಳಿ ಬಂದು ರೇವಣಸಿದ್ದನ ಹೆಸರಿನಲ್ಲಿ ಪ್ರಸಾದ್ ಹಚ್ಚಿ ಹೊಟ್ಟೆಯ ಮೇಲೆ ಕೈಯಾಡಿಸಿದರೆ ಹೆರಿಗೆ ಇಂದಾಗುತ್ತದೆಯೋ ಅಥವಾ ನಾಳೆಯಾಗುತ್ತದೆಯೋ ಎಂದು ಹೇಳುತ್ತಿದ್ದಳು ಊರಿನಲ್ಲಿ ಅವಳೊಬ್ಬಳೇ ವೈದ್ಯರಿಗಿಂತ ವೈದ್ಯಳಾಗಿದ್ದಳು ೨೦೨೦ಕ್ಕೆ ಮುತ್ತಮ್ಮ ತೀರಿಕೊಂಡು ೨೩ ವರ್ಷವಾಯಿತು.







೧೯

# ಊರಿನ ವಿಶೇಷ ಆಚರಣೆಗಳು

## ಜನೇವರಿ–ಡಿಸೆಂಬರ :

ಇಂಗಳೇಶ್ವರಕ್ಕೆ ಹೊಸದಾಗಿ ಸಂಸಾರ ನೆಡಸಲು ಬಂದ ಹೆಣ್ಣ ಮಕ್ಕಳಿಗೆ ಇಲ್ಲಿಯ ಆಚರಣೆಗಳು ಸರಿಯಾಗಿ ತಿಳಿದಿರುವದಿಲ್ಲ ಆದ್ದರಿಂದ ಅವರಿಗೆ ಸಹಾಯವಾಗಲಿ ಎಂದು ಈ ಗ್ರಾಮದಲ್ಲಿ ನಡೆಯುವ ಹಲವಾರು ಧಾರ್ಮಿಕ ಕಾರ್ಯಕ್ರಮಗಳನ್ನು ಇಲ್ಲಿಯ ರೀತಿ–ನೀತಿಯನ್ನು ಯಾವ ಯಾವ ತಿಂಗಳು ಯಾವ ಯಾವ ಹಬ್ಬ ಮಾಡುತ್ತಾರೆ ಎಂದು ಅರಿಯಲು ಇದು ಸಹಾಯಕವಾಗಿದೆ. (ವಾರ ತಿಂಗಳು ಹಬ್ಬಗಳು ಹೆಚ್ಚು ಕಡಿಮೆಯಾಗಬಹುದು)

## ಜನವರಿ :

**ಎಳ್ಳಾಮಾಸಿ–ಬನದ ಹುಣ್ಣಿಮೆ :** ಎಳ್ಳಾಮಾಸಿಯಲ್ಲಿ ಎಲ್ಲಾ ಜನರು ಹೊಲಗಳಿಗೆ ಚರಗ ಚಲ್ಲಲು ಹೋಗುತ್ತಾರೆ ಹೊಲ ಇಲ್ಲದವರು ಹೊಲಇದ್ದವರು ಹೊಲಗಳಿಗೆ ಹೋಗುತ್ತಾರೆ ಕೆಲವರು ಮನೆಯಲ್ಲಿಯೇ ಇರುತ್ತಾರೆ. ಊರಿನಲ್ಲಿ ಬನದ ಹುಣ್ಣಿಮೆಯಲ್ಲಿ ಸೌದತ್ತಿಗೆ ಹೋಗುವರು ಮೊದಲೂ ಎತ್ತಿನ ಬಂಡಿ ಹೂಡಿಕೊಂಡು ಹೊಗುತ್ತಿದ್ದರು ಆದರೆ ಇಂದು ಟಾಕ್ಟರ ಟಂ ಟಂ ತಗೆದುಕೊಂಡು ಹೋಗುವರು

## ಫೆಬ್ರವರಿ :

**ಅವರಾತ್ರಿ ಅಮಾವಾಸೆ – ಭಾರತ ಹುಣ್ಣಿಮೆ :** ಸಾಮಾನ್ಯವಾಗಿ ಊರಿನಲ್ಲಿರುವ ದೇವರಿಗೆ ಹೋಗುವರು ಇದು ಬಡವರ ಭಾರತ ಹುಣ್ಣಿಮೆಯಾಗಿದ್ದರಿಂದ ಕೆಲವು ಜನರು ಬೇವು ಇಳಿಸಿಕೊಳ್ಳುವರು

## ಶಿವರಾತ್ರಿ–ಹೋಳಿಹುಣ್ಣಿಮೆ :

ಚಂದ್ರಶಾಲೆಯಲ್ಲಿ ಮತ್ತು ಸೋಮೇಶ್ವರ ದೇವಾಲಯದಲ್ಲಿ ರಾತ್ರಿ ಭಜನೆ ನಡೆಯುತ್ತದೆ.

ಈ ಸಮಯದಲ್ಲಿ ಕೇರಿಯ ಮನೆತನದ ಹೆಣ್ಣುಮಗಳು ಮಾತಂಗಿಯನ್ನು ಮನೆಯೊಳಗೆ ಕರೆಸಿಕೊಂಡು ಮಾತಂಗಿಯು ತಂದು ಪಲಕಿಗೆ ಬದನೆಕಾಯಿ, ತಪ್ಪಲಉಳ್ಳಾಗಡ್ಡಿ, ಗಜ್ಜರಿ, ಗೆಣಸು ದೀಪಕ್ಕೆ ಎಣ್ಣೆಯನ್ನು ಹಾಕುವರು ಮಾತಂಗಿಯು ಪೂಜೆಯನ್ನು ಸಲ್ಲಿಸಿ ಬೇವಿನ ತಪ್ಪಲು ತಗೆದುಕೊಂಡು ಮನೆಹೊರಗೆ ಹೋಗುವವಳು ಮನೆಯಮಂದಿ ಎಲ್ಲರು ಮನೆಯ ಮುಂದೆ ಸಾಲಾಗಿ ನಿಲ್ಲುವರು ಆಗ ಮಾತಂಗಿ ಹಿಡಿದ ಬೇವಿನಸೊಪ್ಪಗೆ ನೀರು ಹಾಕುವರು ಆಗ ಮಾತಂಗಿಯು ಉದೋ ಉದೋ ಉದೋ.. ಎನ್ನುವಳು ಮನೆ ಮಂದಿಯಲ್ಲಾ ಉದೋ ಉದೋ ಉದೋ ಎನ್ನುವರು ನಂತರ ಮನೆಯೊಳಗೆ ಹೊಗಿ ಲಾಬಾನ ಹಾಕಿದಾಗ ಎಲ್ಲರು ಪಲಕಿಗೆ ನಮಸ್ಕಾರ ಮಾಡಿ ನಂತರ ಮಾತಂಗಿಯು ಪಲಕಿಯನ್ನು ತಗೆದುಕೊಂಡು ಹವಳ ಮುತ್ತ ಬಿದ್ದಾವ ಬಳಕೊರಿ ಹವಳಮುತ್ತ ಬಿದ್ದಾವ ಬಳಕೋರಿ ಎಂದು ಹೇಳಿ ಹೋಗುವವಳು. (ಕೆಲವಷ್ಟು ಮನೆತನಗಳು)

## ಯುಗಾದಿ-ದವನದ ಹುಣ್ಣಿಮೆ :

**ಮಾರ್ಚ :** ಬೇವಿನ ತಪ್ಪಲು ತಂದು ಅಂಗಡಿಯಲ್ಲಿ ಅದಕ್ಕೆ ಬೇಕಾದ ಎಚ್ಚ ತಂದು ಯುಗಾದಿ ದಿನ ಕೇರಿಯಲ್ಲಿರುವ ಕೊಪ್ಪದ ದುರ್ಗಾದೇವಿಯ ಜಾತ್ರೆ ನಡೆಯುತ್ತದೆ ಇಲ್ಲಿ ರಾತ್ರಿ ಜಾಗರಣೆಗೆ ಡೊಳ್ಳಿನಪದದ ಮ್ಯಾಳ ಕರೆಸಿ ಹಾಡಿಸುವರು.

ಯುಗಾದಿಯಾದ ಐದು ದಿನಕ್ಕೆ ನೆಳಮಾಳಸಿದ್ದೇಶ್ವರ ಜಾತ್ರೆಯು ನಡೆಯುತ್ತದೆ. ಹಾಲಬಾವಿಯ ಬಳಿ ಗಂಗಾಸ್ಥಳಕ್ಕೆ ಹೋಗಿ ಬಂದ ನೆಲಮಾಳಸಿದ್ದೇಶ್ವರರ ದೇವರ ಪಲ್ಲಕ್ಕಿ ಹಾಗೂ ಇತರೇ ಊರಿನಿಂದ ಹಲವಾರು ಪಲ್ಲಕ್ಕಿಗಳು ಬಂದಿರುತ್ತವೆ ಊರ ಜನ ದೇವರನ್ನು ಡೊಳ್ಳು ಬಾರಿಸುತ್ತಾ ಹಾಲಬಾವಿಯ ಬಳಿ ಬಂದು ದೇವರನ್ನು ಕರೆದುಕೊಂಡು ಹೋಗುವರು ದಾರಿಯ ಮದ್ಯದಲ್ಲಿ ಮುಂದಿನ ಮಳೆಯ ಬಗ್ಗೆ ಸಿದ್ದರ ನುಡಿ ಕೇಳುತ್ತಾ ಅಗಸಿಯ ಮುಖಾಂತರ ನೆಲಮಾಳಸಿದ್ದನ ಗುಡಿಗೆ ಹೋಗುವರು ಅಂದು ರಾತ್ರಿ ಡೊಳ್ಳಿನಪದ ಮರುದಿನ ನಾಟಕ ಜರಗುವದು. ದವನದ ಹುಣ್ಣಿಮೆಯ ದಿನ ಚಂದ್ರನಿಗೆ ಆರುತಿ ಮಾಡುವರು.





## ಅಕ್ಷತ್ತದಗಿ ಅಮವಾಸ್ಯೆ - ಆಗಿಹುಣ್ಣಿಮೆ :

**ಎಪ್ರೀಲ್ :** ವಿರಕ್ತಮಠದ ಅಗ್ಗಿಯನ್ನು ವಡ್ಡರ ಪೂಜಾರಿ ಮನೆತನಕ್ಕೆ ಬಳುವಳಿಯಾಗಿ ಬಂದಿದೆ ಅಕ್ಷತ್ತ ಅಮಾವಾಸೆ ದಿವಸ ಅಗ್ಗಿಯನ್ನು ಹಾಯುವರು ಊರಿನ ಸುತ್ತ ಮುತ್ತಲಿನ ಜನರು ಬಂದು ಅಗ್ಗಿಯನ್ನು ನೋಡುವರು ಬಸವ ಜಯಂತಿಯಂದು ಬಸವಮಾತಾ ಮಾದಲಾಂಬಿಕೆಯ ಸ್ಮಾರಕ ಭವನದಿಂದ ಬಸವೇಶ್ವರರ ಭಾವ ಚಿತ್ರವನ್ನು ಊರಿನಲ್ಲಿ ಮೆರವಣಿಗೆ ಮಾಡುವರು ನಂತರದಲ್ಲಿ ಬಸವ ಸ್ಮಾರಕದಲ್ಲಿ ಬಸವನ ತೊಟ್ಟಿಲದಲ್ಲಿ ಹಾಕುವ ಕಾರ್ಯಕ್ರಮ ಜರಗುವದು ಮತ್ತು ರೈತರು ಎತ್ತುಗಳನ್ನು ಸ್ನಾನ ಮಾಡಿಸಿ ಚಪಾತಿ ಬಾಳೆಯನ್ನು ತಿನಿಸಿ ಪೂಜೆ ಸಲ್ಲಿಸುವರು.

## ಬಾದಮಿ ಅಮವಾಸೆ - ಕಾರಹುಣ್ಣಿಮೆ :

**ಮೇ :** ಕುಂಬಾರ ಓಣಿಯಲ್ಲಿಯ ಚೌಡೇಶ್ವರಿ ದೇವತೆಯ ಜಾತ್ರೆ ನಡೆಯುತ್ತದೆ

**ಕಾರಹುಣ್ಣಿಮೆ :** ಕಾರಹುಣ್ಣಿಮೆಯ ದಿನ ರೈತರು ದನಗಳಿಗೆ ಸ್ನಾನ ಮಾಡಿಸಿ ಪೂಜೆ ಮಾಡುತ್ತಾರೆ ಅಂದು ಸಂಜೆ ಕರಿ ಹರಿಯುತ್ತಾರೆ ಕರಿಹರಿಯಲು ಕೆಂದ ಬಿಳಿ ಕರಿ ಬಣ್ಣದ ಎತ್ತುಗಳನ್ನು ತಂದು ಓಡಿಸುತ್ತಾರೆ ಅಗಸಿಯ ಬಳಿ ಕೋಲಕಾರ ಮಾಡಿಕೊಂಡ ಬಂದ ಬೇವಿನ ತಪ್ಪಲಿನ ಕರಿ(ಒಂದು ಉದ್ದ ದಾರಕ್ಕೆ ಬೇವಿನ ತಪ್ಪಲನ್ನು ಕಟ್ಟಿರುತ್ತಾರೆ) ಯಾವ ಎತ್ತು ಬೇಗ ಓಡಿಬಂದು ಅದನ್ನು ಹರಿಯುತ್ತದೆ ಆ ವರ್ಷ ಆ ಬೆಳೆ ಚನ್ನಾಗಿ ಬರುತ್ತದೆ ಎಂದು ರೈತರಲ್ಲಿ ನಂಬಿಕೆ

**ವಿರಕ್ತಮಠದ ಜಾತ್ರೆ :** ಈ ತಿಂಗಳಿನಲ್ಲಿಯೇ ವಿರಕ್ತಮಠದ ಜಾತ್ರೆ ಬರುತ್ತದೆ ಶ್ರೀ ಸಿದ್ದಲಿಂಗೇಶ್ವರ ಗದ್ದುಗೆಗೆ ಅಭಿಷೇಕ ಮಾಡಿ ಊರಿನಲ್ಲಿ ಪಲ್ಲಕ್ಕಿ ಆನೆ ಅಂಬಾರಿಯ ಕುದುರೆ ಎತ್ತು ಪುರವಂತರು ಮೆರವಣಿಗೆ ಮಾಡುವರು ನಂತರ ಧರ್ಮ ಸಭೆ ಅನ್ನ ಸಂತರ್ಪಣೆ ನಡೆಯುತ್ತದೆ.

**ಕೆರೆ ಕಟ್ಟುವದು :** ಇದು ಊರಿನಲ್ಲಿ ತುಂಬಾ ವಿಶೇಷವಾದ ಹಬ್ಬ. ರೈತರು ಮಳೆ ಬರುವದಕ್ಕಿಂತ ಬಿತ್ತುವ ಬೀಜಗಳು ಸರಿಯಾಗಿ ನಾಟುತ್ತವೆ (ಮೊಳಕೆ) ಎಂದು ತಿಳಿಯಲು ಮಾಡಿದ ಹಬ್ಬ ಇದಾಗಿದೆ ಊರಿನ ದೊಡ್ಡ ಕೆರೆಯ ಮಣ್ಣು ತಂದು ಒಂಬತ್ತು ದಿನ, ಐದು ದಿನಗಳವರೆಗೆ ಗೋಧಿ ಶಶಿ ಹಾಕುವರು ನಂತರ ಗ್ರಾಗಿ ಕಡಬ ಚಪಾತಿ ಪಲ್ಯ ಮಾಡಿಕೊಂಡ ತಿಂಗಳೇಶ್ವರಕ್ಕೆ ಹಾಗೂ ಶ್ರೀ

ರೇವಣಸಿದ್ದೇಶ್ವರ ಗುಡ್ಡಕ್ಕೆ ಎಲ್ಲಾ ಚಿಕ್ಕ ಮಕ್ಕಳು ಹಾಗೂ ಹರೆಯದ ಹುಡುಗ ಹುಡುಗಿಯರು ಬಾಳ ಜನ ಅಲ್ಲಿ ಒಂದು ನಾಟಕದ ರೀತಿ ಒಂದು ಸ್ಟೋರಿ ನಡೆಯುತ್ತದೆ ಈ ಸ್ಟೋರಿಯಲ್ಲಿ ಸುಮಾರು ಜನರ ಗುಂಪಿನಲ್ಲಿ ಒಬ್ಬರು ಸತ್ತಿರುತ್ತಾರೆ ಎಲ್ಲರು ಅಳುವರು ಅಳುವಿನ ಹಾಡು ಹೀಗಿರುತ್ತದೆ :

> "ಎನ್ ಸತ್ತೆ ಚನ್ನಮಲ್ಲಿ ನಿನ್ನ ಗಂಡ ಪರಧೇಶಿ
> ಗಾರಗಿ ತಿಂತು ಗೋರಿಗೆ ಹೊಂಟೆಲ್ಲ ಎಂದು ಅಳುವರು"...

**ಮಣ್ಣೆತ್ತಿನ ಅಮವಾಸೆ – ಕಡ್ಲಿಗರ ಹುಣ್ಣಿಮೆ :**

ಕುಂಬಾರ ಮನೆತನದವರು ಕೆರೆಯಲ್ಲಿಯ ಕಪ್ಪು ಮಣ್ಣು ಕೆಂಗೇರಿಯ ಕೆಂಪು ಮಣ್ಣು ತಂದು ಮಣ್ಣೆತ್ತ ಮಾಡಿ ಬಾಬ ಇದ್ದ ಮನೆಗಳಿಗೆ ಹಾಗೂ ಊರಿನಲ್ಲಿ ಹಂಚುವರು ಕಡ್ಲಿಗಾರ ಹುಣ್ಣಿಯ ದಿನ ಹಾಲಬಾವಿಗೆ ಹೋಗಿ ಅಲ್ಲಿ ಎಲೆಯ ಮೇಲೆ ಕಡ್ಲಿಬೆಳೆ ಹಾಕಿ ಪೂಜೆ ಸಲ್ಲಿಸುವರು

**ನಾಗರ ಅಮವಾಸೆ – ನೂಲ ಹುಣ್ಣಿಮೆ :**

ನಾಗರ ಪಂಚಮಿ ನಾಡಿಗೆ ದೊಡ್ಡದು ಎಂಬ ವಾಣಿಯಂತೆ ನಮ್ಮ ಊರಿನಲ್ಲಿ ಸಿಹಿ ಪದಾರ್ಥ ಮಾಡುವರು ಮುಖ್ಯವಾದ ಸ್ಥಳದಲ್ಲಿ ಜೋಕಾಲಿ ಕಟ್ಟುವರು ಇದೇ ನಾಗರ ಅಮವಾಸೆಯಿಂದ ಒಂದು ತಿಂಗಳ ಕಾಲ ರೇವಣಸಿದ್ದರ ಬೆಟ್ಟಕ್ಕೆ ಭಕ್ತರು ನಡೆದುಕೊಂಡು ಗುರುವಿನ ದರ್ಶನ ಪಡೆದುಕೊಳ್ಳುವರು ಅದರಂತೆ ನೂಲು ಹುಣ್ಣಿಮೆಯ ದಿನ ರಕ್ಷೆಯನ್ನು ಅಕ್ಕ ತಂಗಿಯರು ರಾಖಿ ಕಟ್ಟಿದರೆ ಅದರಂತೆ ರಾಷ್ಟ್ರೀಯ ಸ್ವಯಂ ಸೇವಕರು ಎಲ್ಲರೂ ಕೂಡಿಕೊಂಡು ರಕ್ಷಾಬಂದನ ಆಚರಿಸುವರು

**ಬೆನಕನ ಅಮವಾಸೆ – ಅನಂತನ ಹುಣ್ಣಿಮೆ :**

ಬೆನಕನ ಅಮಾವಾಸೆಗೆ ಎಲ್ಲಾ ಯುವಕರು ಕೂಡಿಕೊಂಡು ಊರಿನಲ್ಲಿ ಹಲವಾರು ಕಡೆ ಗಣಪತಿಯನ್ನು ಪ್ರತಿಷ್ಠಾನ ಮಾಡುವರು ಚಾವಡಿ ಗಣಪ, ಸೋಮೇಶ್ವರ ಗಣಪ ಬಸ್‌ಸ್ಟ್ಯಾಂಡ ಗಣಪ, ಮಾದರ ಓಣಿ ಗಣಪ ಕೋಲಕಾರ ಓಣಿ ಗಣಪ, ಶೇಕಣ್ಣೆಯವರ ಓಣಿ ಗಣಪ ಗೌಡರ ಓಣಿ ಗಣಪ ತಾಂಡೆ ಗಣಪ ಮುಂತಾದವು ಅತಿ ಮುಖ್ಯವಾಗಿವೆ. ಗಣಪ ಬಂದ ನಾಲ್ಕನೇಯ ದಿನ ಜೋಕುಮಾರ ಕುಂಬಾರ ಮನೆಯಲ್ಲಿ ಹುಟ್ಟುವನು ಕೋಲಕಾರ ಮನೆತನದವರು ತಲೆಯ ಮೇಲೆ ಹೊತ್ತುಕೊಂಡು ಊರಿನಲ್ಲಿ ಸುತ್ತಾಡಿ ಕೇರಿಯ ಜನ ಅವನನ್ನು





ಹೊಡೆದಾಗ ಅವನು ಯಾವ ಕಡೆ ಮುಖಮಾಡಿ ಬಿದ್ದು ಮರಣ ಹೊಂದುವನೋ ಆ ಕಡೆ ಸುಖಾಲ ಎಂದು ನಂಬಿಕೆ.

**ಮಾಹಾನವಮಿ – ಶಿಗಿ ಹುಣ್ಣಿಮೆ :**

ಇಂಗಳೇಶ್ವರದಲ್ಲಿ ಹಲವಾರು ಹಬ್ಬಗಳು ಈ ತಿಂಗಳಲ್ಲಿಯೇ ಜಾಸ್ತಿ ರೈತಾಪಿ ಜನ ಮನೆಯನ್ನು ಸಾರಿಸಿ ೯ ದಿನ ೫ ದಿನ ಎಂದು ದೇವರಮುಂದೆ ದೀಪ ಹಾಕುವರು ಅವರೇ ಹೂ ಈ ಹಬ್ಬದಲ್ಲಿ ಅತಿ ಮುಖ್ಯ ಬನ್ನಿ ಮುಡಿಯುವದು ಒಂದು ವಿಶಿಷ್ಠ ಆಚರಣೆ ನಾವು ಇಲ್ಲಿ ಕಾಣುತ್ತೇವೆ ಅದರಂತೆ ಯಲ್ಲಮ್ಮದೇವಿ ಜಾತ್ರೆ ಈ ತಿಂಗಳಲ್ಲಿ ನಡೆಯುತ್ತದೆ ಪತ್ತಾರ ಮನೆಯಲ್ಲಿ ಶೀಗವ್ವನ ಮಾಡಿರುತ್ತಾರೆ ಊರಿನಲ್ಲಿ ಕೆಲ ಜನಾಂಗ ಮನೆಯಲ್ಲಿ ಪ್ರತಿಷ್ಠಾಪಿಸುತ್ತಾರೆ.

**ದೀಪಾವಳಿ– ಗೌರಿಹುಣ್ಣಿಮೆ :**

ಈ ಹಬ್ಬದಲ್ಲಿ ಜನರಿಗೆ ಹಾಗೂ ದನಗಳಿಗೆ ದೃಷ್ಟಿಯಾಗದಂತೆ ಪೀಡಿ ಬೆಳಗುವದು ಅತಿ ಮುಖ್ಯವಾಗಿದೆ ರೈತಾಪಿ ಜನರು ಮನೆಯ ಮುಂದೆ ಸ್ವಲ್ಪ ಬೆಂಕಿಹಾಕಿ ದನಗಳನ್ನು ದಾಟಿಸುವರು ದನಗಳಿಗೆ ಪೀಡಿಯನ್ನು ಬೆಳಗುವದು ಒಂದು ವಿಶಿಷ್ಠವಾದ ಆಚರಣೆ ಇಲ್ಲಿ ಕೆರೆಯಲ್ಲಿ ಬೆಳೆಯುವ ಆಫಿನಿಂದ ಹಾಗೂ ಗಣಜಿಗನ ಹುಲ್ಲಿನಲ್ಲಿ ಐದು ಹೆಡೆ ಅಥವಾ ಏಳು ಹೆಡೆ ಹಾವುಗಳನ್ನು ಮಾಡುವರು ಅದರ ಮಧ್ಯೆ ಒಂದು ಕೊಬ್ಬರಿಯ ಪಟ್ಟಿಯಲ್ಲಿ ಎಣ್ಣೆಯ ದೀಪ ಹಚ್ಚಿ ರೈತರ ಮನೆಯಲ್ಲಿಯ ದೇವರಿಗೆ ಹಾಗೂ ದನಗಳಿಗೆ ಹಾಡು ಹಾಡಿ ಅವುಗಳ ಪೀಡೆ ಹೋಗಲೆಂದು ಬೆಳಗಿ ಹಾಡನ್ನು ಹಾಡುವರು

**ದೇವರಿಗೆ :**

> ಕುಡಿ ಕುಡಿ ಕುಂಬಳ ಕುಡಿ
> ಕುದರಿಗೆ ಹಾಕುವ ಕುತನಿ ತಡಿ
> ದೇವರಿಗೆ ಹಾಕು ಬೆಳ್ಳಿತಡಿ ತಡಿ
> ಆನಿ ಪೀನಿ ಚಾನಗೋ ನಮ್ಮ ದೇವರ ಪೀಡಾ ಚಿಕಳೋ.

**ಎತ್ತಿಗೆ :**

> ಅಳಿಚೆಂಡಿ ಹೋರಿ...
> ದಿಂಡವಾರ ಪೋರಿ...

ಹೋರಿ ಬರುವಾಗ ಪೋರೆಲ್ಲಿತ್ತು
ಕಲ್ಲ ಕನ್ಯಾಗ ಗಜ ನಿಂತಿತೋ
ಪೋರಿ ಹಣಿಮ್ಯಾಲ ಹನಚಿ ಬಟ್ಟ
ಹೋರಿ ಹಣಿಮ್ಯಾಲ ಕುಂಕುಮ ಬಟ್ಟ
ಆನಿ ಪೀನಿ ಚಾನಗೋ
ನಮ್ಮ ಹೋರಿ ಪೀಡಾ ಚಿಕಳೋ

**ಆಡಿಗೆ :**

ಚೈ ಚೈ ಸಜ್ಜಿಕೊಯ್ಯ
ನಾಳಿಗೆ ಬಂದು ಕೂಲಿ ವಯ್
ನಾಡದ ಬಂದು ಕೊಡಗೊಲ್ ವಯ್
ಆನಿ ಪೀನಿ ಚಾನಗೋ
ನಮ್ಮ ಆಡಿನ ಪೀಡಾ ಚಿಕಳೋ

**ಎಮ್ಮೆ :**

ಎಮ್ಮಿ ಎಮ್ಮಿ ಹೆಂಗಿರಬೇಕೋ
ಸರ್ ಬುರ್ ಹಿಂಡಿರಬೇಕೋ
ಓಲಿಮ್ಯಾಲ ಇಟ್ಟಿರಬೇಕೋ
ಬೆಕ್ಕ ಬಂದು ಚಲ್ಲಿರಬೇಕೋ
ಮಾವ ಬಂದು ನಕ್ಕಿರ ಬೇಕೋ
ಅತ್ತಿ ಬಂದು ಬೈದಿರ ಬೇಕೋ
ಅತ್ತಿ ಸೀರಿ ಕತ್ತಿಮ್ಯಾಲ
ಮಾವನ ದೋತ್ರ ಮಂಚದ ಮ್ಯಾಲ
ಆನಿ ಪೀನಿ ಚಾನಗೋ
ನಮ್ಮ ಎಮ್ಮಿ ಪೀಡಾ ಚಿಕಳೋ

**ಆಕಳಿಗೆ :**

ಹಂಡ ಆಕ್ಳಾ ಬಂಡ ಆಕ್ಳಾ
ಕಲಬುರ್ಗಿ ದಾರ್‍ಯಾಗ, ಕಳ್ಳನ ಕೈಯಾಗ
ಬೆಳ್ಳಿಯ ಕುಡಗೋಲ, ಬೆಳ್ಳಿಯ ಕುಡಗೋಲಗೆ
ಮಾರ ಮಾರ ಹುಲ್ಲ, ಮಾರ ಮಾರ ಹುಲ್ಲಗೆ





ಬೊರ ಬೊರ ಹಾಲ, ಬೊರ ಬೊರ ಹಾಲಗೆ
ಕೆನ್ನಿ ಕೆನ್ನಿ ಮೊಸರ, ಕೆನ್ನಿ ಕೆನ್ನಿ ಮೊಸರಗೆ
ಕಳ ಕಳ ತುಪ್ಪ ಆನಿ ಪೀನಿ ಚಾನಗೋ
ನಮ್ಮ ಆಕಳ ಪೀಡಾ ಚಿಕಳೋ

ಅದರಂತೆ ಶ್ರಿ ಭೀರಲಿಂಗೇಶ್ವರ ಜಾತ್ರೆ ನೆಡಯುತ್ತದೆ ಎಲ್ಲಾ ಜನರು ಅಂಗಡಿಗಳಿಗೆ ಪೂಜೆ ಸಲ್ಲಿಸುವರು ಅದರಂತೆ ಗೌರವ್ವನ ಊರಿನಲ್ಲಿ ಕೆಲ ಜನಾಂಗ ಮನೆಯಲ್ಲಿ ಪ್ರತಿಷ್ಠಾಪಿಸುತ್ತಾರೆ ಹಾಗೂ ಶ್ರೀ ರೇವಣಸಿದ್ದರ ಪುರಾಣ ಇದೇ ತಿಂಗಳು ಪ್ರಾರಂಭವಾಗುವದು ಪುರಾಣ ಪ್ರಾರಂಬವಾದಾಗಿನಿಂದ ನಮ್ಮ ಊರಿನಲ್ಲಿ ಜಾತ್ರೆಯ ಸಡಗರ ಪ್ರಾರಂಭವಾಗುತ್ತದೆ ನಸುಕಿನ ೩ ಘಂಟಗೆ ಚಿಕ್ಕ ಮಕ್ಕಳು ಯುವಕರು ಎಲ್ಲರೂ ಕಸ ಗುಡಿಸಿದರೆ ಹೆಣ್ಣು ಮಕ್ಕಳು ರಂಗೋಲಿಯನ್ನು ಚಂದ್ರಶಾಲೆ ಮುಂದೆ ಅಗಸಿ ಪ್ರಮುಖಬೀದಿ ಮತ್ತು ಬಸ್ ಸ್ಟ್ಯಾಂಡ ಆವರಣದಲ್ಲಿ ರಂಗೋಲಿಯ ಚಿತ್ರವನ್ನು ಬಿಡಿಸುತ್ತಾರೆ

**ಚಟ್ಟಿ ಅಮವಾಸೆ – ಹೊಸ್ತಲ ಹುಣ್ಣಿಮೆ :**

ಈ ತಿಂಗಳಲ್ಲಿ ನಿರಂತರವಾಗಿ ಶ್ರೀ ರೇವಣಸಿದ್ದೇಶ್ವರರ ಪುರಾಣ ನಡೆದು ಬರುತ್ತದೆ ಹುಣ್ಣಿಮೆಯ ಮೂರು ದಿನದ ಮುಂಚೆ ದೇವರು ಹೊರಗೆ ಕುಳಿತುಕೊಳ್ಳುತ್ತಾರೆ ಹುಣ್ಣಿಮೆಯ ದಿನ ದೇವರಿಗೆ ನೈವೇದ್ಯ ಕೊಡುವದು ಮರುದಿನ ದೇವರು ಗುಡ್ಡ ಏರುವರು ಊರಿನಲ್ಲಿ ಕುಸ್ತಿ ವಜ್ಜಿ ರಸಮಂಜರಿ ಕಾರ್ಯಕ್ರಮ ಟಗರಿನ ಕಾಳಗ, ಎತ್ತಿನ ಬಂಡಿ, ಎತ್ತಿನಿಂದ ಕಲ್ಲು ಜಗ್ಗಿಸುವದು ಕ್ರಿಕೇಟ್ ವಾಲಿಬಾಲ್ ಚಿತ್ರ ವಿಚಿತ್ರ ಮದ್ದು ಸುಡುವದು ಮುಂತಾದ ಕಾರ್ಯಕ್ರಮಗಳು ಸುಮಾರು ಐದು ದಿನಗಳ ಕಾಲ ನಡೆಯುತ್ತವೆ.

# ಸಮಾರೋಪ

ಅಗಾಧ ಪಾಂಡಿತ್ಯನ್ನು ಹೊಂದಿರುವ ಶಂಕರರು ತಮ್ಮ ಶಿಷ್ಯರೊಂದಿಗೆ ನದಿ ದಡದಲ್ಲಿ ನಡೆದುಕೊಂಡು ಹೊರಟಿರುತ್ತಾರೆ. ತಮ್ಮ ಶಿಷ್ಯಂದಿರು ಗುರುಗಳೇ ನಿಮ್ಮಂತಹ ಪಂಡಿತರು ಯಾರು ಇಲ್ಲ ಎನ್ನುವರು ಆಗ ಶಂಕರರು ಒಬ್ಬ ಶಿಷ್ಯನಿಗೆ ಕರೆದು ತಮ್ಮ ಬಳಿ ಇದ್ದ ಮಂತ್ರ ದಂಡವನ್ನು ನೀರಿನಲ್ಲಿ ಮುಳುಗಿಸಿಕೊಂಡು ಬಾ ಎಂದರಂತೆ ಸರಿ ಎಂದು ನದಿ ನೀರಿನಲ್ಲಿ ಆ ಮಂತ್ರದಂಡವನ್ನು ಮುಳುಗಿಸಿ ಗುರುಗಳಿಗೆ ತಂದು ಕೊಟ್ಟ ಆಗ ಗುರುಗಳು ಹೇಳಿದರು ನಾನು ಕಲಿತ ವಿದ್ಯ ಈ ಮಂತ್ರ ದಂಡಕ್ಕೆ ಎಷ್ಟು ನೀರು ಹತ್ತಿದೇವೊ ಅಷ್ಟನ್ನು ಮಾತ್ರ ನಾ ಪಾಂಡಿತ್ಯವನ್ನು ಸಂಪಾದಿಸಿದ್ದೇನೆ ನಾ ಇನ್ನೂ ಈ ನದಿಯಲ್ಲಿ ನೀರು ಎಷ್ಟು ಹರಿತ್ತಿದೇಷ್ಟು ಜ್ಞಾನ ಸಂಪಾದಿಸಬೇಕಾಗಿದೆ ಎಂದರೂ.

ಇಲ್ಲಿ ಗಮನಿಸಿರಬಹುದು ನನ್ನೂರಿನಲ್ಲಿಯು ಸಹ ನದಿ ನೀರಿನಷ್ಟು ಸಂಶೋಧನೆಗಳು ಇವೆ ನಾ ಹುಡುಕಿದ್ದು ಬರಿ ಸಾಸಿವೆ ಕಾಳಿನಷ್ಟು. ಆ ಕಾಲದಲ್ಲಿಯ ಹಳೆಯ ಓಣಿಗಳ ಸಂಶೋಧನೆ ಇನ್ನಷ್ಟು ಆಗಬೇಕಿದೆ. ಇಲ್ಲಿ ಆಳಿದ ರಾಜರ ಇತಿಹಾಸ ಇನ್ನೂ ಅರಿಯಬೇಕಿದೆ ಅದೇಷ್ಟೋ ದೇವಾಲಯಗಳು ಪಾಳು ಬಿದ್ದಿವೆ. ಈ ಮಣ್ಣಿನಲ್ಲಿ ಹಟ್ಟಿದವರು ಜಗತ್ತಿಗೆ ಧರ್ಮದ ದಾರಿ ತೋರಿಸಿದ್ದಾರೆ ಇವರ ಪುಣ್ಯದ ಫಲ ಅವರು ನಡೆದಾಡಿ ಈ ಮಣ್ಣಿನ ಗುಣ ಜಾನಪದ ಕಲಾವಿದರು, ಶಿಕ್ಷಕರು ಇನ್ನೂ ಹಲವಾರು ಕಲೆಯನ್ನು ಬಲ್ಲವರಿಗೆ ಗ್ರಾಮದಲ್ಲಿ ಬರವಿಲ್ಲ.ಧರ್ಮ ಧರ್ಮದ ಮಧ್ಯ ಜಗಳವಿಲ್ಲ ಅಭಿವೃದಿಯ ವಿಚಾರದಲ್ಲಿ ಅತಿ ಹಿಂದೆ ಬಿದ್ದಿದೇವೆ ಅನಿಸುತ್ತದೆ.

ಒಟ್ಟಲ್ಲಿ ಹೇಳಬೇಕೆಂದರೆ ಈ ಪುಣ್ಯ ಭೂಮಿಯಲ್ಲಿ ಜನಸಿದ್ದು ನಮ್ಮ ಸೌಭಾಗ್ಯವೆಂದು ನಾ ಭಾವಿಸುತ್ತೇನೆ.







# ಗ್ರಂಥ ಋಣ


೧. ಕರ್ನಾಟಕ ಗೆಝೆಟಿಯರ್

೨. ವಿಜಯಪುರ ಜಿಲ್ಲಾ ಗೆಝೆಟಿಯರ್

೩. ಸಮಗ್ರಭಾರತದ ಇತಿಹಾಸ – ಸದಾಶಿವ

೪. ಕರ್ನಾಟಕ ಇತಿಹಾಸ – ಪಾಲಾಕ್ಷ

೫. ದೇವಾಲಯದ ಕೋಶ – ವಾಸುದೇವ ಬಡಿಗೇರ

೬. ಇಂಗಳೇಶ್ವರದ ಗ್ರಾಮ ಚರಿತ್ರೆ – ಪಾರ್ವತಿ ಎಸ್. ಚೌಕಿಮಠ

೭. ರತ್ನಾಕರ ವಿರಚಿತ ಶತಕತ್ರಯ – ಎತ್ತೂರ ಶಾಂತಿರಾಜ ಶಾಸ್ತ್ರಿ

೮. ಮಾರ್ಗ ಸಂಪುಟಗಳ ೪ – ಡಾ॥ ಎಂ.ಎಂ. ಕಲಬುರ್ಗಿ

೯. ಡಾ॥ ಎಂ. ಚಿದಾನಂದ ಮೂರ್ತಿಯವರ ಹಲವು ಪುಸ್ತಕಗಳು

೧೦. ಶರಣ ಪರಂಪರೆ ಪುಸ್ತಕ ಮಾಲೆ– ಡಾ॥ ಮೃತ್ಯುಂಜಯ ರುಮಾಲೆ

೧೧. ವಿರಣ್ಣ ದಂಡೆಯವರ ಕೆಲವು ಪುಸ್ತಕಗಳು

೧೨. ಇನ್ನೂ ಹತ್ತು ಹಲವಾರು ಪುಸ್ತಕಗಳು

೧೩. ಪತ್ರಿಕೆಗಳು – ಅಂತರಜಾಲ ಮಾಧ್ಯಮ


